ಕಯ್ಯಲ್ಲಿ ಸಂಬಳಗೋಲು ಹಿಡಿದುಕೊಂಡು ಸೋಮಾಸಿಮಾರನು ತಿರುವಂಬರದಲ್ಲಿ ನಡಿಸಿದ ಯಾಗ ಮಂಟಪಕ್ಕೆ ಬಂದನು. ಅವನನ್ನು ಸೋಮಾಸಿಮಾರನು ಕಂಡು ಶಿವನು ಈ ವೇಷದಿಂದ ನನ್ನ ಮನವನ್ನು ಪರೀಕ್ಷೆ ಮಾಡಲು ಬಂದಿರುವನೆಂದು ತಿಳಿದು ಅವನನ್ನು ನಮಸ್ಕರಿಸಿದನು. ಆಗ ಶಿವನು— ನಾನು ಹೊಲೆಯನು, ಅಸ್ಪೃಶ್ಯನು ಎಂದು ಹೇಳಿದರೂ ಸೋಮಾಸಿಮಾರನು ಅದನ್ನು ಲಕ್ಷಿಸದೆ— ನಿಮ್ಮ ನಿಜವನ್ನು ನಾನು ಬಲ್ಲೆ. ನನಗೆ ಕ್ಷಮೆ ಮಾಡಿರಿ, ಯಾಗ ಶಾಲೆಗೆ ನಡೆಯಿರಿ, ಎಂದು ಪೂಜಾಮಂಟಪಕ್ಕೆ ಕರೆತಂದನು. ಆಗ ವಿಪ್ರರು ಆ ಶ್ವಪಚನನ್ನು ನೋಡಿ ಇಲ್ಲಿ ನಾವು ಇರಕೂಡದೆಂದು ಎಲ್ಲರೂ ಹೊರಟು ಹೋದರು. ಆದರೆ ಸೋಮಾಸಿಮಾರನು ಅವನನ್ನು ಭಕ್ತಿ ಪೂರ್ವಕವಾಗಿ ಪೂಜಿಸಿ ಅವನ ಪಾದತೀರ್ಥವನ್ನು ಸ್ವೀಕರಿಸಿದನು. ಆಗ ಪರಮಾತ್ಮನು ಆತನ ನಿಷ್ಕಪಟ ಭಕ್ತಿಗೆ ಸಂತೋಷಪಟ್ಟು ತನ್ನ ನಿಜರೂಪದಿಂದ ವಿರಾಜಿಸಿದನು. ಆ ಸಮಯದಲ್ಲಿ ಆ ಯೋಗಶಾಲೆಯೇ ಪುಷ್ಪಕವಿಮಾನವಾಯಿತು. ಆ ವಿಮಾನದ ಮೂಲಕ ಶಿವನು ಸೋಮಾಸಿಮಾರನನ್ನು ಕೈಲಾಸಕ್ಕೆ ಕರದೊಯ್ದು ಅವನಿಗೆ ಗಣಪದವಿಯನ್ನು ಕೊಟ್ಟನು.

ಸೋಮಾಸಿಮಾರನ ಚರಿತ್ರೆಯು ಹರಿಹರ ಕವಿಯ ರಗಳೆಯಲ್ಲಿಯೂ ಇತರ ಶಿವಶರಣ ಚರಿತ್ರ ಗ್ರಂಥಗಳಲ್ಲಿಯೂ ಬರುತ್ತದೆ. ಸೋಮಾಸಿಮಾರನು ಬ್ರಾಹ್ಮಣನಿದ್ದರೂ ಅವನು ಅಸ್ಪೃಶ್ಯತ್ವವನ್ನು ಪೂರ್ಣವಾಗಿ ತೊರೆದವನಾಗಿದ್ದನು. ಅವನು ಕೇವಲ ಕರ್ಮಠತನದ ವ್ಯರ್ಥತೆಯನ್ನು ಹೋಗಲಾಡಿಸಿ ಭಕ್ತಿಗೆ ಮಹತ್ವಕೊಟ್ಟಿದ್ದನೆ. ಗುರೂಪದೇಶವು ಅವಶ್ಯವಾದುದೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಸೋಮಾಸಿಮಾರನು ೬೩ ಪುರಾತನರಲ್ಲಿ ಒಬ್ಬನೆಂದು ಎಣಿಸಲ್ಪಟ್ಟಿದ್ದಾನೆ. ಆದರೆ ಅವನು ಕಾಶ್ಮೀರ ದೇಶದಿಂದ ಹೊರಟು ಚೋಳ ದೇಶದವರೆಗೆ ಬರುವವರೆಗೆ ನಡೆದ ಸಂಗತಿಗಳು ತಮಿಳು ಗ್ರಂಥಗಳಲ್ಲಿ ಹೇಳಲ್ಪಟ್ಟಿರುವದಿಲ್ಲ. ಶಿವಶರಣರ ಅನೇಕ ನಡೆಗಳು ಅವನ ಚರಿತ್ರೆಯಲ್ಲಿರುವದು ಕಂಡುಬರುತ್ತದೆ. ಆದರೆ ಉದ್ಭಟನ ಮತ್ತು ಈತನ ಚರಿತ್ರೆಗಳಿಂದ ಹಿಂದಿನ ಕಾಲದ ಶಿವಬ್ರಾಹ್ಮಣರು ಯಜ್ಞ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಆದರೆ ಕರ್ನಾಟಕದ ಶಿವಶರಣರು ಈ ಪದ್ಧತಿಯನ್ನು ಸಂಪೂರ್ಣವಾಗಿ ತ್ಯಜಿಸಿದ್ದಾರೆ.

---

# ಸಿಂಧುಮರಾಳ

**ಸಿಂಧುದೇಶ:—** ಕಾಶ್ಮೀರ ಅಫಗಾಣಿಸ್ತಾನ, ಗುಜರಾಥ ದೇಶಗಳಲ್ಲಿ ಒಂದುಕಾಲದಲ್ಲಿ ಹೇಗೆ ಹಿಂದೆ ಹೇಳಿದಂತೆ ಶಿವಶರಣರು ಉದಯವಾದರೋ ಹಾಗೆಯೇ ಸಿಂಧೂದೇಶದಲ್ಲಿಯೂ ಕೂಡ ಉದಯವಾಗಿದ್ದಾರೆ. ಇದು ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುತ್ತದೆ. ಈಗ ಅಲ್ಲಿ ಇಸ್ಲಾಮ ಧರ್ಮವು ನೆಲೆಗೊಂಡಿರುತ್ತದೆ. ಆದರೆ ಪುರಾತನಕಾಲದಲ್ಲಿ ಅಲ್ಲಿ ಶಿವಧರ್ಮವಿತ್ತೆಂಬುದು ಅಲ್ಲಿಯ ಪ್ರದೇಶಗಳಲ್ಲಿ ಮುಖ್ಯವಾಗಿ ಮಹೆಂಜೊದಾರೋ ಮುಂತಾದಕಡೆಗೆ ದೊರೆತಿರುವ ಅವಶೇಷಗಳಿಂದ ತಿಳಿದುಬರುತ್ತದೆ. ಅಲ್ಲಿ ಕೆಲವು ಶಿವಶರಣರೂ ಉಂಟಾಗಿದ್ದಾರೆ. ಅವರಲ್ಲಿ ಸಿಂಧುಮರಾಯ ಅಥವಾ ಸಿಂಧುಮರಾಳ ಈತನು ಮುಖ್ಯನಾಗಿದ್ದಾನೆ. ಈತನ ಹೆಸರು ಶಿವಶರಣರ ಚರಿತ್ರ ಗ್ರಂಥಗಳಲ್ಲಿ ಯಾವಾಗಲೂ ಬರುವದುಂಟು.

ಸಿಂಧುಮರಾಯ ಅಥವಾ ಸಿಂಧುಮರಾಳನು ಸಿಂಧುದೇಶದ ಅರಸನಾಗಿದ್ದನು. ಅವನು ಸಕಲೈಶ್ವರ್ಯ ಸಂಪತ್ತಿನಿಂದ ಕೂಡಿದವನಾಗಿದ್ದನು. ಅವನು ಶಟ್ಸ್ಥಲಾಚರಣೆಯುಳ್ಳವನಾಗಿ ಜಂಗಮಪ್ರೇಮಿಯಾಗಿದ್ದನು. ಅವನು ಬೇಡಿದವರಿಗೆ ಎಂದೂ ಇಲ್ಲೆನ್ನನು. ಹೀಗಿರಲು ಅವನ ದಾಯಾದಿಗಳು ಅವನ ರಾಜ್ಯವನ್ನು ಸಾಧಿಸಬೇಕೆಂದು ಅವನೊಡನೆ ಕದನ ಹೂಡಿದರು. ಆದರೆ ಅವನೊಡನೆ ಅವರು ಕಾದಲಾರದೆ ಕೆಟ್ಟೋಡಿದರು. ಹೀಗಿರಲು ಒಂದುದಿವಸ ಕೆಲವು ಚರಮೂರ್ತಿಗಳು ಅವನಲ್ಲಿಗೆ ಬಂದು ಈ ದೇಶವು ನಮಗರ್ಪಿತವಾದದ್ದು. ಆದ್ದರಿಂದ ಅಷ್ಟ ಮಹಾಭೋಗವನ್ನು ನಮಗೆ ಸಲ್ಲಿಸಬೇಕೆಂದು ಅವನಿಗೆ ಕೇಳಲು ಅವನು ಅದೆಲ್ಲವನ್ನು ಅವರಿಗೆ ಸಲ್ಲಿಸಿದನು. ಮುಂದೆ ಅವರು ಅವನ ದೇಶ ಕೋಶವನ್ನು ಸಹ ಬೇಡಿದರು. ಆಗ ಅವನು ಅವನ್ನೂ ಅವರಿಗೆ ಕೊಟ್ಟು ತಾನು ಒಬ್ಬ ಚರವೇಷ ಧಾರಣ ಮಾಡಿ ದೇಶಾಂತರವನ್ನು ಮಾಡುವೆನೆಂದು ರಾಜ್ಯ ಬಿಟ್ಟು ಹೊರಟನು. ಆಗ ಪರದೇಶಗಳಲ್ಲಿದ್ದ ಅವನ ದಾಯಾದಿಗಳು ಇದನ್ನು ತಿಳಿದು ತಾವು ಜಂಗಮ ವೇಷಧಾರಿಗಳಾಗಿ ಅವನೊಡನೆ ಹಿತವಚನಗಳನ್ನಾಡುತ್ತ ಅವನನ್ನು ಕಂಡರು. ಆದರೆ ಅವರ ಕೃತಕ ವೇಷವನ್ನು ಅರಸನು ತಿಳಿಯಲಾರದೆ ಹೋಗಿ, ನಿಮಗೇನುಬೇಕು ಬೇಡಿರಿ ಎಂದು ಕೇಳಲು ಅವರು ಅವನಿಗೆ — ನೀನು ನಿನ್ನ ರಾಜ್ಯವನ್ನು ಚರಮೂರ್ತಿಗಳಿಗೆ ಈ ಮೊದಲಿಗೆ

ಕೊಟ್ಟು ಬಿಟ್ಟೆ. ಇನ್ನು ಮೇಲೆ ನಮಗೇನು ಕೊಡುವೆ ಎಂದು ಕೇಳಲು ಅವನು ಅವರಿಗೆ — ನನ್ನ ತನ್ನುಪ್ರನ್ನು ಶಿವಗ್ರೀವೆನು ಎಂದು ನುಡಿದನು. ಆಗ ಅವರು ಅವನಿಗೆ — ನೀನು ನಿನ್ನ ಅರ್ಧಾಂಗವನ್ನು ನಮಗೆ ಕೊಡಬೇಕು. ಅಂದರೆ ನೀನು ನಿಜವಾದ ಭಕ್ತನೆಂದೆನ್ನಲು ಅವನು ಹಾಗೆಯೇ ಆಗಲೆಂದು ಅನ್ನಲು, ಅವರು ಒಂದು ಕರಗಸವನ್ನು ತೆಗೆದುಕೊಂಡು ಅವನನ್ನು ಸೀಳ ಹತ್ತಿದರು. ಆಗ ಅವನ ನ್ಯೆಯ್ಯ ಎಡಭಾಗದಿಂದ ಕಂಬನಿಗಳು ಉದುರ ಹತ್ತಿದವು. ಆದಕ್ಕೆ ಅವರು ಹೀಗೇಕೆಂದು ಕೇಳಲು, ಅರಸನು ಅವರಿಗೆ — ಬಲಭಾಗವು ನಿಮಗೆ ಸಲ್ಲಿತೆಂದು ಸಂತೋಷದಲ್ಲಿದೆ. ಆದರೆ ವಾಮ ಭಾಗವು ತಾನು ವ್ಯರ್ಥವಾದೆನೆಂದು ಚಿಂತೆಯಲ್ಲಿದೆ ಎಂದು ನುಡಿದನು. ಇದನ್ನು ಕೇಳಿ ಶಿವನು ಅವನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಕರಗಸವನ್ನು ಹೊರಗೆ ತೆಗೆದು, ಎರಡೂ ಭಾಗಗಳನ್ನು ಕೂಡಿಸಲು ದಾಯಾದಿಗಳು ನಡಿಸಿದ ಕಾಪಟ್ಯವು ಅರಸನಿಗೆ ತಿಳಿದು ಬಂದಿತು. ಆಗ ಶಿವನು ಅರಸನಿಗೆ ನಿನಗೇನು ಬೇಕು ಬೇಡೆಂದು ಕೇಳಲು — ನನ್ನ ಬಂಧುಗಳು ಮಾಡಿದ ಅಪರಾಧವನ್ನು ಕ್ಷಮಿಸಬೇಕು, ಮತ್ತು ಅವರನ್ನೊಡಗೊಂಡು ನಮ್ಮೆಲ್ಲರನ್ನು ನಿನ್ನಲ್ಲಿ ಇಂಬಿಟ್ಟುಕೊಳ್ಳಬೇಕು ಎಂದು ಹೇಳಲು ಶಿವನು ಅವನ ಭಕ್ತಿಗೆ ಮೆಚ್ಚಿ ಎಲ್ಲರನ್ನೂ ಕೈಲಾಸಕೊಯ್ದನು

---

## ಸಿಂಧುಸೇನ.

ವಿದರ್ಭ :— ಮೊದಲಿನ ಕಾಲದಲ್ಲಿ ಈಗಿನ ವರ್ಹಾಡ ಪ್ರಾಂತಕ್ಕೆ ವಿದರ್ಭ ವೆಂಬ ಹೆಸರಿತ್ತು, ಇಲ್ಲಿ ಸೂರ್ಯಪುರವೆಂಬ ಪಟ್ಟಣದಲ್ಲಿ ಸಿಂಧುಸೇನನೆಂಬ ರಾಜನು ರಾಜ್ಯವಾಳುತ್ತಿದ್ದನು. ವಿದರ್ಭ ದೇಶಕ್ಕೆ ಹೊಂದಿಯೇ ವಿಂಧ್ಯ ದೇಶವಿದ್ದು ಅಲ್ಲಿ ಶ್ರೀ ಕಾಳಾಪುರ ವೆಂಬಲ್ಲಿ ಸಿಂಹರಾಜನೆಂಬ ರಾಜನು ಆಳುತಿದ್ದನು. ಆಗ ಉಭಯತರಲ್ಲಿ ಮನಸ್ತಾಪವು ಉಂಟಾಗಲು ಅವರಿಬ್ಬರೂ ಕಾಳಗವನ್ನು ಪ್ರಾರಂಭಿಸಿದರು. ಕಾಳಗವಾರಂಭವಾಗಲು ಸಿಂಧುಸೇನನು ಚತುರಂಗ ಬಲ ಸಮೇತವಾಗಿ ಕಾಳಗಕ್ಕೆ ಹೊರಟನು. ಆ ಕಾಲದಲ್ಲಿ ಒಬ್ಬ ಶಿವ ಭಕ್ತನು ಅವನಿಗೆ ಒಂದು ಮುತ್ತಿನ ಸರವನ್ನು ಕಾಣಿಕೆಯಾಗಿ ಕೊಟ್ಟನು. ಅದರಲ್ಲಿ ಒಂದು ರುದ್ರಾಕ್ಷಿಮಣಿಯು ಇತ್ತು.

ಇತ್ತ ಸಿಂಹರಾಜನು ವಿಷ್ಣುಭಕ್ತನಾಗಿ ಒಂದು ಚಕ್ರವನ್ನು ಪಡೆದವನಾಗಿದ್ದನು.

ಯುದ್ಧವು ಉಭಯತರಲ್ಲಿ ಪ್ರಾರಂಭವಾಯಿತು. ಸಿಂಹರಾಜನು ತನ್ನ ಚಕ್ರಾಯುಧವನ್ನು ಬಿಡಲು ಅದು ಸಿಂಧುಸೇನನ ಬಲವನ್ನೆಲ್ಲ ಕೊಂದುಹಾಕಿತು. ಹೀಗೆ ತನ್ನ ದಂಡು ಸಾಯಲು ಸಿಂಧುಸೇನನು ರಣಾಂಗಣದಿಂದ ಓಡಿಹೋಗಿ ಅರಣ್ಯವಲ್ಲಿ ತಪವನ್ನು ಮಾಡುತ್ತಿದ್ದ ಮುನಿಗಳಿಗೆ ಶರಣುಹೋದನು. ಅವನು ಅವರಿಗೆ ತನ್ನ ಬಲವು ಮಡಿದು ಹೋಯಿತು. ಇದಕ್ಕೆ ಕಾರಣವೇನೆಂದು ಕೇಳಲು ಅವರು ನಿನ್ನ ಸೈನ್ಯನಲ್ಲಿ ದೇವ ಭಕ್ತಿ ಇದ್ದುವರ ಕುರುಹು ಎಷ್ಟುಮಾತ್ರವೂ ಇಲ್ಲ. ಆದರೆ ನಿನ್ನ ಕೊರಳಲ್ಲಿ ಶಿವಮಂತ್ರದಿಂದ ಪುನೀತವಾದ ಒಂದು ರುದ್ರಾಕ್ಷಿ ಮಾತ್ರ ಇದೆ. ಅದರ ಪ್ರಭಾವದ ಮೂಲಕ ನೀನೊಬ್ಬನು ಮಾತ್ರ ಪಾರಾಗಿ ಬಂದೆ ಎಂದು ನುಡಿದು ಇನ್ನು ಮೇಲೆ ನೀನು ಬಲವನ್ನು ಪುನಃ ಕೂಡಿಸಿ ಎಲ್ಲರೂ ಭಸಿತ ರುದ್ರಾಕ್ಷಿಗಳನ್ನು ಧರಿಸುವಂತೆ ಮಾಡು ಎಂದು ಬೋಧಿಸಿದರು.

ಅರಸನು ಆಮೇಲೆ ತನ್ನ ರಾಜಧಾನಿಗೆ ಬಂದು ತನ್ನ ಅರ್ಧ ಬಲಕ್ಕೆ ರುದ್ರಾಕ್ಷಿ, ಉಳಿದ ಅರ್ಧ ಬಲಕ್ಕೆ ಭಸಿತವನ್ನಿಟ್ಟು ಸಿಂಹರಾಜನೊಡನೆ ಕಾಳಗವನ್ನು ಪುನಃ ಪ್ರಾರಂಭಿಸಿದನು. ಆಗ ಸಿಂಹರಾಜನು ತನ್ನ ಚಕ್ರವನ್ನು ಬಿಡಲು ಅದು ಸಿಂಧುರಾಜನ ಬಲಕ್ಕೆಲ್ಲ ಪ್ರದಕ್ಷಿಣ ಹಾಕಿ ತಿರುಗಿ ಹೋಯಿತು.

ಇವನ್ನು ಸಿಂಹರಾಜನು ನೋಡಿ ಒಂದು ಉಪಾಯವನ್ನು ನೆನೆದು ಮತ್ತೊಮ್ಮೆ ಯುದ್ಧವನ್ನು ಪ್ರಾರಂಭಿಸಿದನು. ಯುದ್ಧವು ಪ್ರಾರಂಭವಾಗುವ ಪೂರ್ವದಲ್ಲಿ ಅವನು ವರುಣನನ್ನು ನೆನೆಯಲು ಒಂದು ದೊಡ್ಡ ಮಳೆಯು ಬಂದು ಸಿಂಧುರಾಜನ ಅರ್ಧ ಬಲವು ಧರಿಸಿದ್ದ ವಿಭೂತಿಯನ್ನು ಅಳುಕಿಸಿಬಿಟ್ಟಿತು. ಆಗ ಸಿಂಹರಾಜನು ಬಿಟ್ಟ ಚಕ್ರಾಯುಧವು ವಿಭೂತಿ ಅಳಿಸಿಹೋದವರನ್ನೆಲ್ಲ ಕೊಂದುಹಾಕಿ ಬಿಟ್ಟಿತು.

ಆಗ ಸಿಂಧುಸೇನನು ಈ ಸಂಗತಿಯನ್ನು ಮುನಿಗಳ ಕಡೆಗೆ ಹೋಗಿ ತಿಳಿಸಲಾಗಿ ಅವರು ದಂಡು ಅಳಿದ ಕಾರಣವನ್ನು ಅವನಿಗೆ ಹೇಳುವಲ್ಲಿ ನೀನು ಇನ್ನುಮೇಲೆ ನಿನ್ನ ಎಲ್ಲ ದಂಡು ವಿಭೂತಿ ರುದ್ರಾಕ್ಷಿ ಎರಡನ್ನೂ ಧರಿಸುವಂತೆ ಮಾಡು ಎಂದು ಸೂಚಿಸಲು ಅವನು ಹಾಗೆಯೇ ಮಾಡಿದನು.

ಮುಂದೆ ಯುದ್ಧವು ಪ್ರಾರಂಭವಾಯಿತು. ಆಗ ಸಿಂಹರಾಜನು ಮೊದಲಿನಂತೆ ಮಳೆ ಹುಯ್ಯುವಂತೆ ಮಾಡಿದನು. ಅದರಿಂದ ಸೈನ್ಯವು ಧರಿಸಿದ್ದ ವಿಭೂತಿಯು ಅಳಿಸಿಹೋಯಿತು. ಆದರೆ ರುದ್ರಾಕ್ಷಿಗಳು ಹಾಗೆಯೇ ಇದ್ದಮೂಲಕ ಚಕ್ರಾಯುಧವು ಅವರಿಗೆ ಏನೂ ಮಾಡಲಿಲ್ಲ. ಇಷ್ಟೇ ಅಲ್ಲ, ಅದು ಅವನ ಬಲಕ್ಕೆಲ್ಲ ಪ್ರದಕ್ಷಿಣೆಯನ್ನು ಹಾಕಿ ಹಿಂದಿರುಗಿ ಹೋಯಿತು

ಅಷ್ಟಾವರಣಗಳಲ್ಲಿ ಮಂತ್ರವು ಅತ್ಯಂತ ಮಹತ್ವವಾದದ್ದು. ಅದರ ಮೂಲಕವೇ ಉಳಿದ ಆವರಣಗಳು ಭಕ್ತನಲ್ಲಿ ದೃಢಪಡುತ್ತವೆ. ಆದ್ದರಿಂದ ಮಂತ್ರೋಪದೇಶಕ್ಕೆ ಬಹಳ ಮಹತ್ವದ ಸ್ಥಾನವಿದೆ. ಆದರೆ ಅದನ್ನು ಜಪಿಸಲು ರುದ್ರಾಕ್ಷಿಯೇ ಮುಖ್ಯ ಸಾಧನವಾಗಿರುತ್ತದೆ ಆದರೆ ವಿಭೂತಿಯು ಮಂತ್ರದ ' ಪ್ರಕಾಶವಾಗಿದೆ.

ಈ ಸಂಗತಿಯನ್ನು ಉಭಯರಾಜರು ತಿಳಿದವರಾಗಿ ಕಾಳಗ ಮಾಡುವದನ್ನು ಬಿಟ್ಟುಕೊಟ್ಟರು ಮತ್ತು ಅವರು ವಿಭೂತಿ ರುದ್ರಾಕ್ಷಿಗಳನ್ನು ಧರಿಸಿದವರಾಗಿ ಧರ್ಮದಂತೆ ಆಚರಿಸುತ್ತ ಕೈಲಾಸಕ್ಕೆ ಹೋದರು.

---

## ಕಲಾವತಿ

**ಕಾಶೀಕ್ಷೇತ್ರ:**— ಕಾಶೀಕ್ಷೇತ್ರವು ವಿಶ್ವೇಶ್ವರನ ಸ್ಥಾನವಾಗಿದ್ದು ಅಲ್ಲಿ ಶಿವಭಕ್ತಿಯುತರಾದ ಅನೇಕ ಋಷಿಗಳು ವಾಸಮಾಡುತ್ತಿದ್ದರು. ಕಾಶೀ ರಾಜನಾದರೂ ಶಿವಭಕ್ತಿಯುಳ್ಳವನಾಗಿ ಧರ್ಮದಿಂದ ರಾಜ್ಯ ಪರಿಪಾಲನೆ ಮಾಡುವವನಾಗಿದ್ದನು. ಅವನ ಮಗಳು ಕಲಾವತಿಯು ಎಂಬುವಳಿದ್ದು ಅವಳಾದರೂ ತಂದೆಯಂತೆ ಶಿವಭಕ್ತಿಯುಳ್ಳವಳಾಗಿದ್ದಳು. ಅವಳು ಈ ಕ್ಷೇತ್ರದಲ್ಲಿದ್ದ ದುರ್ವಾಸ ಮುನಿಯಿಂದ ಪಂಚಾಕ್ಷರೀ ಮಂತ್ರದ ಉಪದೇಶವನ್ನು ಹೊಂದಿ ಅದರ ಪ್ರಭಾವದಿಂದ ಆಚರಿಸುವವಳಾಗಿದ್ದಳು.

ಹೀಗಿರುವಲ್ಲಿ ದಕ್ಷಿಣ ದೇಶದಲ್ಲಿ ಶಿವಭಕ್ತರಾದ ಪಾಂಡ್ಯವಂಶದ ರಾಜರು ರಾಜ್ಯವಾಳುತ್ತಿದ್ದರು. ಅವರಲ್ಲಿ ದಾಸೋಹರಾಯನು ಈ ಕಾಲದಲ್ಲಿ

ಆಳುತ್ತಿದ್ದ ಅವನಿಗೆ ಕಾಶೀರಾಜನು ತನ್ನ ಮಗಳಾದ ಕಲಾವತಿಯನ್ನು ಕೊಟ್ಟು ಮದುವೆ ಮಾಡಿದನು.

ಲಗ್ನವಾದಬಳಿಕ ಉಭಯ ಸತಿಪತಿಗಳು ಏಕಾಂತದಲ್ಲಿರುವಾಗ ಕಲಾವತಿಯು ಗಂಡನನ್ನು ಬಿಟ್ಟು ಬೇರೆಕಡೆಗೆ ಮಲಗಲಾಗಿ ಹೀಗೇಕೆಂದು ಅವನು ಅವಳಿಗೆ ಕೇಳಲು ಕಲಾವತಿಯು ನಿನಗೆ ಪಂಚಾಕ್ಷರೀ ಮಂತ್ರೋಪದೇಶವಿಲ್ಲ. ನಾನು ಈ ಮಹಾಮಂತ್ರದ ಉಪದೇಶವನ್ನು ಹೊಂದಿದ್ದೇನೆ. ಆದ್ದರಿಂದ ನಾನು ಇತರರನ್ನು ಸ್ಪರ್ಶಿಸಕೂಡದೆಂಬ ನಿಯಮವಿದೆ ಎಂದೆನ್ನಲು ರಾಜನು ಬಲಾತ್ಕಾರದಿಂದ ಅವಳನ್ನು ಸ್ಪರ್ಶಿಸಿದನು. ಆಗ ಅವಳ ದೇಹವು ಅವನಿಗೆ ಕಾದ ಕಬ್ಬಿಣದಂತೆ ಭಾಸವಾಯಿತು. ಹೀಗಾಗಲು ಅರಸನು ಅಂಜಿ ಅವಳಿಗೆ— ನಿನ್ನ ಶರೀರವು ಬಹು ಮೃದುವಾದುದು. ಆದರೆ ನಿನ್ನ ದೇಹದಲ್ಲಿ ಹೀಗೆ ಜ್ವಾಲೆಯಂತೆ ಏಕಾಯಿತೆನಲು ಅವಳು ರೋಗಿಯು, ಸೂತಕಿಯು, ಗರ್ಭಿಣಿಯು, ರತಿ ಇಲ್ಲದವಳು, ವ್ರತಸ್ಥೆಯು ಇವರನ್ನು ಮುಟ್ಟಬಾರದೆಂಬ ಶಾಸ್ತ್ರವಿದೆ. ನಾನು ಪಂಚಾಕ್ಷರೀ ಮಂತ್ರದಿಂದ ಪುನೀತಳಾಗಿದ್ದೇನೆ. ಆದ್ದರಿಂದ ಆ ಮಂತ್ರವು ನಿನ್ನನ್ನು ಸುಟ್ಟಿತು, ಎಂದು ಹೇಳಿದಳು. ಆಗ ದಾಸೋಹರಾಯನು ಆಶ್ಚರ್ಯಬಟ್ಟು ಮಂತ್ರದ ಮಹಿಮೆಯು ಇಷ್ಟು ಅಗಾಧವಾದುದೇ ಎಂದು, ಇನ್ನು ಮೇಲೆ ನಾನೂ ನಿನ್ನಂತೆ ಉಪದೇಶವನ್ನು ಹೊಂದುವೆನೆಂದು ಗಾರ್ಗ್ಯಮುನಿಯ ಕಡೆಗೆ ಹೋಗಿ ಅವನಿಂದ ಮಂತ್ರೋಪದೇಶವನ್ನು ಹೊಂದಿದನು. ಹೀಗೆ ಉಪದೇಶವನ್ನು ಹೊಂದಲಾಗಿ ಅವನಲ್ಲಿದ್ದ ಪಾಪಗಳು ಕಾಗೆಗಳ ರೂಪವಾಗಿ ಹಾರಿ ಹೋದವು. ಅಂದಿನಿಂದ ಅವನ ದೇಹವು ಪರಿಶುದ್ಧವೂ ಪವಿತ್ರವೂ ಆಯಿತು. ಹೀಗಾಗಲು ಅವನು ತನ್ನ ಹೆಂಡತಿಗೆ— ನೀನು ನನಗೆ ಧರ್ಮಾಚರಣೆಯನ್ನು ಕೊಟ್ಟು ಪುನೀತನನ್ನಾಗಿ ಮಾಡಿದೆ, ಎಂದು ಅವಳನ್ನು ಸ್ತುತಿಸುವವನಾದನು. ಮುಂದೆ ಉಭಯತರು ಪಂಚಾಕ್ಷರೀ ಮಂತ್ರ ಸ್ಮರಣೆಯಿಂದ ಪರಿಶುದ್ಧರಾಗಿ ಅದಕ್ಕನುಸರಿಸಿ ಆಚರಿಸುತ್ತ ಕೈಲಾಸಕ್ಕೆ ಹೋದರು. ಇದರಿಂದ ಕಲಾವತಿಯು ಮಧುರಾ ಪಟ್ಟಣ ಮತ್ತು ಕಾಶೀ ಕ್ಷೇತ್ರಗಳಲ್ಲಿ ಬಹು ಶ್ರೇಷ್ಠ ಶಿವಶರಣೆ ಎಂದು ಪ್ರಸಿದ್ಧಳಾಗಿದ್ದಾಳೆ. ಶಿವಶರಣರ ಚರಿತ್ರೆಗಳಲ್ಲಿ ಕಲಾವತಿಯ ಚರಿತ್ರೆಯು ತಪ್ಪದೆ ಬರುತ್ತದೆ.

---

# ಪರದೇಶಗಳಲ್ಲಿ ಶೈವ ಮತದ ಪ್ರಸಾರವು.

ಈವರೆಗೆ ನಾವು ಹಿಂದುಸ್ಥಾನ ದೇಶದಲ್ಲಿಯ ಬೇರೆ ಬೇರೆ ಪ್ರಾಂತಗಳಲ್ಲಿ ಆಗಿ ಹೋದ ಶಿವಶರಣರ ಚರಿತ್ರೆಗಳನ್ನು ಉದಹರಿಸಿದೆವು. ಅವರ ಹೆಸರುಗಳು ವೀರಶೈವ ವಾಙ್ಮಯದಲ್ಲಿ ಆಗಿಂದಾಗ್ಗೆ ಬರುವವುಂಟು. ಅವುಗಳ ಮೇಲಿಂದ ಶೈವ ಮತವು ಒಂದು ಕಾಲದಲ್ಲಿ ಭರತಖಂಡವನ್ನೆಲ್ಲ ವ್ಯಾಪಿಸಿತ್ತೆಂದು ಕಂಡುಬರುತ್ತದೆ. ಪೂರ್ವಕಾಲದಲ್ಲಿ ಭರತಖಂಡ ಮತ್ತು ಅದಕ್ಕೆ ಸಮೀಪವರ್ತಿ ದೇಶಗಳಾದ ಸಿಂಹಲದ್ವೀಪವೂ ಜಾವಾ, ಬೋರ್ನಿಯೋ ಮೊದಲಾದ ಈಗಿನ ಇಂಡೋನೇಶಿಯದ ಭೂಭಾಗಗಳೂ ಅರಬಸ್ಥಾನ ಪ್ಯಾಲೆಸ್ಟಾಯಿನ್ ಇಜಿಪ್ತ ಈ ದೇಶಗಳೂ ಇವುಗಳಲ್ಲಿ ಪರಸ್ಪರ ನಿಕಟ ಸಂಬಂಧವಿದ್ದು ಇಲ್ಲಿ ಶೈವ ಮತವು ಕೆಲವೊಂದು ಸ್ವರೂಪದಲ್ಲಿ ಅಸ್ತಿತ್ವದಲ್ಲಿತ್ತೆಂದು ಈಚಿಗಿನ ಶೋಧಗಳಿಂದ ಕಂಡುಬರುತ್ತದೆ. ಆದರೆ ಇದು ಸಾವಿರ ಎರಡು ಸಾವಿರ ವರ್ಷಗಳ ಮುಂಚಿತವಾದ ಕಾಲವು. ಆದ್ದರಿಂದ ಈ ವಿಷಯದ ಬಗ್ಗೆ ಅನೇಕ ದಂತಕಥೆಗಳುಂಟಾಗಿರುತ್ತವೆ. ಆದರೆ ಅವುಗಳನ್ನು ನಾವು ಸೂಕ್ಷ್ಮವಾಗಿ ನಿರೀಕ್ಷಿಸಿದಲ್ಲಿ ಶಿವಮತವು ಇಂಥ ದೂರ ದೇಶಗಳಲ್ಲಿ ಸಹ ಪ್ರಾದುರ್ಭವಿಸಿತ್ತೆಂದು ತಿಳಿದುಬರುತ್ತದೆ.

### ಸಿಂಹಲದ್ವೀಪ

ರೇಣುಕಃ— ಸಿಂಹಲದ್ವೀಪವು ಹಿಂದುಸ್ಥಾನಕ್ಕೆ ತೀರ ಸಮೀಪವರ್ತಿಯಾದ ದೇಶವು. ಈಗ ಇಲ್ಲಿ ಬೌದ್ಧ ಧರ್ಮವು ಅಸ್ತಿತ್ವದಲ್ಲಿದೆ. ಆದರೂ ಒಂದು ಕಾಲದಲ್ಲಿ ಅಲ್ಲಿ ಶೈವ ಮತವು ಪ್ರಾದುರ್ಭವಿಸಿತ್ತೆಂದು ತಿಳಿದುಬರುತ್ತದೆ. ರಾವಣನು ಶಿವಮತಕ್ಕೆ ಹೊಂದಿದವನು. ಅವನ ಮೂಲಕವೇ ಗೋಕರ್ಣ ಕ್ಷೇತ್ರದಲ್ಲಿ ಶಿವಲಿಂಗವು ಸ್ಥಾಪಿತವಾದುದು. ಮುಂದೆ ವಿಭೀಷಣನು ಅವನ ತರುವಾಯ, ರಾಜ್ಯವಾಳುತ್ತಿದನು. ಅವನ ಕಾಲಕ್ಕೆ ಸಿಂಹಲ ದ್ವೀಪದಲ್ಲಿ ಶೈವ ಮತವು ಮತ್ತಿಷ್ಟು ವೃಥಿ ಪಟ್ಟಿತು. ಇದು ಕರ್ನಾಟಕ ದೇಶದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ರೇಣುಕನ ಮೂಲಕವೇ ಆಯಿತೆಂದು ರೇಣುಕನ ಚರಿತ್ರೆಯಿಂದ ತಿಳಿದು ಬರುತ್ತದೆ. ಈ ಮಹಾನುಭಾವನ ಚರಿತ್ರೆಯನ್ನು ವಿವರಿಸುವ ಅನೇಕ ಗ್ರಂಥಗಳು ವೀರಶೈವ ವಾಙ್ಮಯದಲ್ಲಿ ಉಪಲಬ್ಧವಿವೆ. ಅವುಗಳಿಂದ ಕೆಳಗೆ ಕಾಣಿಸಿದ ಸಂಗತಿಗಳು ತಿಳಿದು ಬರುತ್ತಿವೆ.

ರೇಣುಕನ ಜನ್ಮಸ್ಥಾನವು ಆಂಧ್ರ ಮತ್ತು ಕರ್ನಾಟಕ ದೇಶಗಳ ಗಡಿಯಲ್ಲಿರುವ ಕೊಲ್ಲಿಪಾಕಿ ಅಥವಾ ಕೊಲನುಪಾಕಿ ಎಂಬುದಾಗಿದ್ದು ಇಲ್ಲಿ ಸೋಮೇಶ್ವರ ಲಿಂಗದ ಮಹತ್ವದ ದೇವಾಲಯವಿದೆ. ಅದರಲ್ಲಿಯ ಲಿಂಗದಲ್ಲಿ ರೇಣುಕನು ಪ್ರಾದುರ್ಭವಿಸಿದನು ಮುಂದೆ ಅವನು ಕರ್ನಾಟಕ ದೇಶಕ್ಕೆ ಬಂದು ಇಲ್ಲಿದ್ದ ಮಲಯ ಪರ್ವತದಲ್ಲಿ ವಾಸಿಸುವವನಾದನು. ಈಗ ಮೈಸೂರು ಸಂಸ್ಥಾನದಲ್ಲಿರುವ ಬಾಳೇಹಳ್ಳಿಯು ಇದೇ ಪ್ರದೇಶದಲ್ಲಿರುತ್ತದೆ. ಇಲ್ಲಿ ಅಗಸ್ತ್ಯ ಮಹಾ ಮುನಿಯು ಅನೇಕ ತಪಸ್ವಿಗಳೊಡನೆ ವಾಸಿಸುವವನಾಗಿದ್ದನು. ರೇಣುಕನು ಇಲ್ಲಿ ಇದ್ದಾಗ್ಗೆ ಅವನು ಅಗಸ್ತ್ಯಮುನಿಗೆ ಷಟ್‌ಸ್ಥಲ ಜ್ಞಾನವನ್ನುಂಟುಮಾಡಿಕೊಟ್ಟು ಅವನಿಗೆ ಲಿಂಗದೀಕ್ಷೆಯನ್ನಿತ್ತನು. ಆಮೇಲೆ ಉಭಯತರು ರಾಮೇಶ್ವರಕ್ಕೆ ಬಂದು ಅಲ್ಲಿ ಕೆಲಕಾಲವಿದ್ದರು. ಮುಂದೆ ರೇಣುಕನು ಕಂಚೀ ಪಟ್ಟಣಕ್ಕೆ ಬಂದು 'ಪಿಣ್ಯಾಕನೈನಾರ' ಎಂಬ ಹೆಸರನ್ನು ಇಟ್ಟುಕೊಂಡು ಅಲ್ಲಿ ಅನೇಕ ಪವಾಡಗಳನ್ನು ನಡೆಯಿಸಿದನು. ಮುಂದೆ ಅವನು ಉತ್ತರ ಕರ್ನಾಟಕದಲ್ಲಿ ಅತಿ ಪ್ರಸಿದ್ಧ ಸ್ಥಳವಾದ ಮಂಗಳವಾಡದಲ್ಲಿ ಬಂದು ವಾಸಿಸುವವನಾದನು.

ಹೀಗೆ ಅವನು ಅಲ್ಲಿ ವಾಸಿಸುತ್ತಿರುವಾಗ ಸಿಂಹಲದ್ವೀಪಾಧಿಪತಿಯಾದ ವಿಭೀಷಣನು ಅವನನ್ನು ಕಂಡು ಅವನನ್ನು ತನ್ನ ದೇಶಕ್ಕೆ ಬರಮಾಡಿಕೊಂಡು ಅವನಿಂದ ಮೂರು ಕೋಟಿ ಶಿವಲಿಂಗಗಳನ್ನು ತನ್ನ ರಾಜ್ಯದಲ್ಲಿ ಸ್ಥಾಪಿಸಿದನು.

ಈ ಪ್ರಕಾರ ಸಿಂಹಲದ್ವೀಪದಲ್ಲಿ ಶಿವಮತವನ್ನು ದೃಢಪಡಿಸಿದ ಬಳಿಕ ರೇಣುಕನು ಈಗ ತುಮಕೂರು ಜಿಲ್ಲೆಯಲ್ಲಿರುವ ಕಕುದ್ಗಿರಿಗೆ ಬಂದು ಅಲ್ಲಿ ಋಷ್ಯಶೃಂಗ ಮುನಿಯನ್ನು ಕಂಡು ಅದರ ನೆರೆಯಲ್ಲಿರುವ ಕೂಷ್ಮಾಂಡ ಪರ್ವತಕ್ಕೆ ಬಂದನು. ಅಲ್ಲಿ ಕೆಲಕಾಲವಿದ್ದು ಅಲ್ಲಿಂದ ತುಂಗಭದ್ರಾ ನದೀ ತೀರದಲ್ಲಿದ್ದ ಪಂಪಾ ಕ್ಷೇತ್ರಕ್ಕೆ ಆಗಮಿಸಿದನು. ಅಲ್ಲಿ ಅವನು ವಿರೂಪಾಕ್ಷ ಸ್ವಾಮಿಯನ್ನು ಸಾಕ್ಷಾತ್ಕರಿಸಿಕೊಂಡನು. ಅವನು ವಾಸಮಾಡಿದ ಈ ಸ್ಥಳಗಳಲ್ಲೆಲ್ಲ ಅವನು ಶಿವಧರ್ಮವನ್ನು ನೆಲೆಗೊಳಿಸಿದನು.

ಆಮೇಲೆ ಅವನು ಶ್ರೀಶೈಲ ಕ್ಷೇತ್ರದಲ್ಲಿ ಅನೇಕ ಸಂವತ್ಸರ ಕಾಲ ಕಳೆದನು. ಮುಂದೆ ಕಾಶೀಕ್ಷೇತ್ರ, ಹಿಮಾಚಲ ಮೊದಲಾದ ಸ್ಥಳಗಳಲ್ಲಿ

ಧರ್ಮೋದ್ಧಾರ ಕಾರ್ಯಗಳನ್ನು ಮಾಡುತ್ತ ಕಡೆಗೆ ಕೊಲ್ಲಿಪಾಕಿಗೆ ಬಂದು ಅಲ್ಲಿಯ ಸೋಮನಾಥ ಲಿಂಗದಲ್ಲಿ ಐಕ್ಯ ಹೊಂದಿದನು. ಈ ಪ್ರಕಾರ ರೇಣುಕನ ಸಂಕ್ಷಿಪ್ತ ವೃತ್ತಾಂತವಿರುತ್ತದೆ.

ರೇಣುಕನ ತರುವಾಯ ಗಳಂ ವರ್ಷಗಳ ಮೇಲೆ ರೇವಣಸಿದ್ಧೇಶ್ವರನು ಬಿಜ್ಜಳನ ಕಾಲದಲ್ಲಿ ಪ್ರಸಿದ್ಧಿಗೆ ಬಂದನು. ಈ ಮಹಾಪುರುಷನು ಮಾಡಿದ ಧರ್ಮೋದ್ಧಾರ ಕಾರ್ಯಗಳು ರೇಣುಕನು ನಡಿಸಿದ ಕಾರ್ಯಗಳಿಗೆ ಬಹಳ ಹೋಲುವದರಿಂದಲೂ ಅವರಿದ್ದ ಅನೇಕ ಸ್ಥಳಗಳು ಕೂಡ ಒಂದೇ ಇರುವದರಿಂದಲೂ ರೇಣುಕನೇ ಗಳಂ ವರ್ಷಗಳ ತರುವಾಯ ರೇವಣಸಿದ್ಧೇಶ್ವರನೆಂಬ ಹೆಸರಿನಿಂದ ಪ್ರಾದುರ್ಭವಿಸಿದನೆಂದು ವೀರಶೈವ ಗ್ರಂಥಗಳಲ್ಲಿ ಉಲ್ಲೇಖಗಳಿರುತ್ತವೆ. ಆದರೆ ಐತಿಹಾಸಿಕ ದೃಷ್ಟಿಯಿಂದ ವಿಚಾರ ಮಾಡಲಾಗಿ ರೇಣುಕನು ಪುರಾತನ ಕಾಲದಲ್ಲಿ ಅಗಸ್ತ್ಯ ನಂತೆ ಶಿವಮತವನ್ನು ಹಿಂದುಸ್ತಾನದಲ್ಲಿಯೂ ನೆರೆ ದೇಶವಾದ ಸಿಂಹಲ ದ್ವೀಪದಲ್ಲಿಯೂ ಪ್ರಸ್ಥಾಪಿಸಿದನೆಂದು ತಿಳಿಯಲು ಯಾವ ಪ್ರತ್ಯವಾಯವೂ ತೋರುವದಿಲ್ಲ.

## ಇಂಡೋನೇಶಿಯಾ

ಅಗಸ್ತ್ಯ:— ಬ್ರಹ್ಮದೇಶ, ಸಯಾಮ ಮತ್ತು ಇಂಡೋಚಾಯನಾ ಈ ದೇಶಗಳು ಸಮಿಸಮೀಪವಾಗಿದ್ದು ಅವುಗಳ ದಕ್ಷಿಣಕ್ಕೆ ಆಸ್ಟ್ರೇಲಿಯಾ ಈ ದೇಶವು ಇದ್ದು ಇವುಗಳ ಮಧ್ಯದಲ್ಲಿ ಸಣ್ಣದೊಡ್ಡ ಅಸಂಖ್ಯ ದ್ವೀಪಗಳು ಪಸರಿಸಿರುತ್ತವೆ. ಇವುಗಳಿಗೆಲ್ಲ ಈಗ ಇಂಡೋನೇಶಿಯಾ ಎಂಬ ಹೆಸರು ಪ್ರಾಪ್ತವಾಗಿದೆ. ಇವುಗಳಲ್ಲಿ ಸುಮಾತ್ರಾ, ಜಾವಾ, ಬೋರ್ನಿಯೋ ಕಾಂಬೋಡಿಯಾ ಇವುಗಳು ಬಹು ಮಹತ್ವವಾದವುಗಳು. ಈಗ ಅಲ್ಲಿ ಮಹಮ್ಮದೀಯ ಧರ್ಮವು ಪ್ರಚಲಿತವಿದೆ. ಆದರೂ ೩-೪ ಶತಮಾನಗಳ ಹಿಂದೆ ಅಲ್ಲಿ ಶೈವ ಧರ್ಮವು ಪ್ರಬಲಸ್ಥಿತಿಯಲ್ಲಿತ್ತು. ಜಾವಾ ದ್ವೀಪದಲ್ಲಿರುವಷ್ಟು ಸುಂದರವಾದ ಶಿವ ದೇವಾಲಯಗಳು ಹಿಂದುಸ್ತಾನದಲ್ಲಿಯೂ ಕೂಡ ಇಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು .

ಈ ದ್ವೀಪಗಳಲ್ಲಿ ಶಿವಮತವನ್ನು ನೆಲೆಗೊಳಿಸಿದವನು ಅಗಸ್ತ್ಯ ಋಷಿಯೇ ಇದ್ದಾನೆ. ವೀರಶೈವ ಪುರಾಣಗಳಲ್ಲಿ ಮತ್ತು ಕಾವ್ಯಗಳಲ್ಲಿ ಅಗಸ್ತ್ಯ ಋಷಿಯ ಉಲ್ಲೇಖಗಳು ಆಗಿಂದಾಗ್ಗೆ ಬರುತ್ತಿದ್ದು ಅವನು ಅವುಗಳಲ್ಲಿ ಶೈವ ಋಷಿ ಎಂದು ಹೊಗಳಲ್ಪಟ್ಟಿರುತ್ತಾನೆ. ಅವನಿಗೆ ಷಟ್ ಸ್ಥಲ ಜ್ಞಾನವನ್ನು ಉಪದೇಶ ಮಾಡಿದವನು ರೇಣುಕನೆಂದು ಅವುಗಳಲ್ಲಿ ಹೇಳಲ್ಪಟ್ಟಿದ್ದು ಅಗಸ್ತ್ಯನಿಗೂ ವೀರಶೈವ ಇತಿಹಾಸಕ್ಕೂ ನಿಕಟ ಸಂಬಂಧವಿರುತ್ತದೆ.

ಅಗಸ್ತ್ಯನು ಕಾಶೀಪಟ್ಟಣ ವಾಸಿಯು. ಅವನು ಕೇವಲ ಶಿವಭಕ್ತ ನಾಗಿ ಶಿವಲಿಂಗಗಳನ್ನೇ ಯಾವಾಗಲೂ ಪೂಜಿಸುತ್ತಿದ್ದನು. ಆದರೆ ಅವನು ಬಹಳ ದಿವಸ ಉತ್ತರ ಹಿಂದುಸ್ತಾನದಲ್ಲಿದ್ದುದು ಕಂಡು ಬರುವದಿಲ್ಲ. ಅವನು ವಿಂಧ್ಯಾಟವಿಯನ್ನು ದಾಟಿ ದಕ್ಷಿಣಾಪಥದಲ್ಲಿ ಬಂದು ಇರ ಹತ್ತಿದನು. ಅವನು ರಾಮಚಂದ್ರನು ವಾಸಮಾಡಿಕೊಂಡಿದ್ದ ನಾಸಿಕ ಕ್ಷೇತ್ರಕ್ಕೆ ಸಮೀಪವಿರುವ ತ್ರ್ಯಂಬಕೇಶ್ವರಕ್ಕೆ ಬಂದು ಅಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಿದನು ನಾಸಿಕ ಕ್ಷೇತ್ರವು ಅಗಸ್ತ್ಯಾಶ್ರಮವಿದ್ದ ಸ್ಥಾನವೆಂದು ಈಗಲೂ ಅದರ ಪ್ರಸಿದ್ಧಿ ಇದೆ.

ಇಲ್ಲಿ ಅಗಸ್ತ್ಯನು ಕೆಲಕಾಲವಿದ್ದು ಮುಂದೆ ಅವನು ದಕ್ಷಿಣಕ್ಕೆ ತೆರಳಿ ಬದಾಮಿ ಹತ್ತಿರವಿದ್ದ ಮಹಾಕೂಟ ಕ್ಷೇತ್ರಕ್ಕೆ ಬಂದು ಅಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಿದನು. ಅವನು ಅಲ್ಲಿರುವಾಗ ಅವನು ರಾಕ್ಷಸ ರೊಡನೆ ಯುದ್ಧ ಮಾಡುವ ಪ್ರಸಂಗವು ಬಂದೊದಗಿತು. ವಾತಾಪಿಪುರ ಅಂದರೆ ಈಗಿನ ಬದಾಮಿಯಲ್ಲಿ ವಾತಾಪಿ ಎಂಬ ರಾಕ್ಷಸನೂ ಐಹೊಳೆ ಯಲ್ಲಿ ಇಲ್ವಲನೆಂಬ ರಾಕ್ಷಸನೂ ಇಬ್ಬರೂ ಬಂಧುಗಳಾಗಿ ಅಲ್ಲಿ ರಾಜ್ಯ ವಾಳುತ್ತಿದ್ದರು. ಅಗಸ್ತ್ಯನು ಅವರೊಡನೆ ಯುದ್ಧ ಮಾಡಿ ಅವರನ್ನು ಸಂಹರಿಸಿದನು. ಅವನು ಮಹಾಕೂಟವಿದ್ದಲ್ಲಿ ಆಶ್ರಮವನ್ನು ಸ್ಥಾಪಿಸಿದ್ದ ರಿಂದ ಈ ಸ್ಥಳವು ದೊಡ್ಡ ಕ್ಷೇತ್ರವೆಂದೆನಿಸಿಕೊಂಡಿತು. ಅದು ಈಗಲೂ ದಕ್ಷಿಣ ಕಾಶಿ ಎಂದೆನಿಸಿಕೊಂಡಿರುತ್ತದೆ.

ಆಮೇಲೆ ಅಗಸ್ತ್ಯನು ದಕ್ಷಿಣ ದೇಶಕ್ಕೆ ತೆರಳಿ ಅತ್ರಿ, ಭೃಗು ಮೊದಲಾದ ತಾಪಸರಿದ್ದ ಮಲಯ ಪರ್ವತಕ್ಕೆ ಬಂದನು. ಈಗ ಬಾಳೇ ಹಳ್ಳಿ ಗ್ರಾಮವಿದ್ದ ಸ್ಥಳಕ್ಕೆ ಮಲಯ ಪರ್ವತವೆಂಬ ಹೆಸರು ಪುರಾತನ

ಕಾಲದಲ್ಲಿ ಉಂಟಾಗಿತ್ತು. ಅಲ್ಲಿ ಅಗಸ್ತ್ಯನು ಇದ್ದ ಕಾಲದಲ್ಲಿ ರೇಣುಕನು ಇಲ್ಲಿಗೆ ಆಗಮಿಸಿ ಅವನಿಗೆ ಷಟ್‌ಸ್ಥಲ ಮಾರ್ಗವನ್ನು ಉಪದೇಶಿಸಿ ಅವನಿಗೆ ಲಿಂಗಧಾರಣೆಯನ್ನು ಮಾಡಿದನು. ಅಂದಿನಿಂದ ಉಭಯತರು ಕೂಡಿಕೊಂಡು ದೇಶದಲ್ಲಿ ಶಿವಧರ್ಮ ಪ್ರಚಾರ ಕಾರ್ಯದಲ್ಲಿ ತೊಡಗಿದವರಾದರು.

ಉಭಯತರು ಮುಂದೆ ರಾಮೇಶ್ವರಕ್ಕೆ ಬಂದು ಅಲ್ಲಿ ಕೆಲಕಾಲ ಇದ್ದರು. ಆಮೇಲೆ ರೇಣುಕನು ಚೋಳ ರಾಜ್ಯಕ್ಕೂ ಅಗಸ್ತ್ಯನು ಪಾಂಡ್ಯ ರಾಜ್ಯಕ್ಕೂ ಬಂದರು. ಅಗಸ್ತ್ಯನು ಪಾಂಡ್ಯ ರಾಜ್ಯದಲ್ಲಿ ಇದ್ದಾಗ್ಗೆ ಅಲ್ಲಿಯ ರಾಜನು ಅವನನ್ನು ತನ್ನ ಗುರುವಾಗಿ ಮಾಡಿಕೊಂಡನು. ತಮಿಳು ದೇಶದಲ್ಲಿ ಶಿವಧರ್ಮವು ಮೊದಲು ಪ್ರಸಾರ ಹೊಂದಿದ್ದು ಇವನಿಂದಲೇ ಎಂದು ದ್ರಾವಿಡರು ತಿಳಿಯುತ್ತಾರೆ. ತಮಿಳು ಭಾಷೆಯಲ್ಲಿ ವ್ಯಾಕರಣವನ್ನು ಮೊದಲು ರಚಿಸಿದವನು ಅಗಸ್ತ್ಯನು. ಅವನು ಮಾಡಿದ ವ್ಯಾಕರಣಕ್ಕೆ 'ಆಗತ್ತಿಯಂ' ಎಂಬ ಹೆಸರಿದೆ. ಇವನು ದೇವಾಲಯ ರಚನೆಯ ವಿಷಯವಾಗಿಯೂ ಒಂದು ಗ್ರಂಥವನ್ನು ರಚಿಸಿದನು. ಇದಕ್ಕೆ 'ಅಗಸ್ತೀಯ ಸಕಲಾಧಿಕಾರ' ಎಂಬ ಹೆಸರಿದೆ. ಹೀಗೆ ಅಗಸ್ತ್ಯನು ದ್ರಾವಿಡ ಸಂಸ್ಕೃತಿಯ ಉತ್ಪಾದಕನೆಂದು ಅಲ್ಲಿಯ ಪಂಡಿತರು ಈಗಲೂ ತಿಳಿಯುವದುಂಟು.

ಅಗಸ್ತ್ಯನು ದ್ರಾವಿಡ ದೇಶದಲ್ಲಿ ಅನೇಕ ದೇವಾಲಯಗಳನ್ನು ಕಟ್ಟಿಸಿದನು. ಕನ್ಯಾಕುಮಾರಿಯ ಹತ್ತಿರ 'ಪೋಥೀಯ' ಎಂಬ ಹೆಸರಿನ ಬೆಟ್ಟವು ಇದೆ. ಇಲ್ಲಿ ಅಗಸ್ತ್ಯನು ಅದೃಶ್ಯ ರೂಪನಾಗಿ ಇನ್ನೂ ವಾಸಿಸುತ್ತಾನೆಂದು ದ್ರಾವಿಡರು ತಿಳಿಯುತ್ತಾರೆ.

ಅಗಸ್ತ್ಯನು ಹೀಗೆ ದಕ್ಷಿಣ ದೇಶದಲ್ಲಿ ಮಹತ್ತಾದ ಧಾರ್ಮಿಕ ಕ್ರಾಂತಿಯನ್ನು ಮಾಡಿದ ಕಾರಣ ಅವನು ಈ ಭಾಗದಲ್ಲಿ ಭಕ್ತಿಯಿಂದ ಪೂಜಿಸಲ್ಪಡುತ್ತಾನೆ. ಅವನ ಹೆಸರಿನ ಅನೇಕ ದೇವಾಲಯಗಳು ಅಲ್ಲಿ ಇವೆ. ಇವುಗಳಲ್ಲಿ ನಡೆಯತಕ್ಕ ಪೂಜೆಯ ಕ್ರಮಗಳು ಸ್ಕಂದಪುರಾಣ ಮತ್ತು ಅಗ್ನಿಪುರಾಣ ಇವುಗಳಲ್ಲಿ ಉಲ್ಲೇಖವಾಗಿವೆ. ಅವನ ಸಂಬಂಧದ ಮಂತ್ರಗಳೂ ಇವೆ. ಇವುಗಳಲ್ಲೊಂದರ ಅರ್ಥವು ಏನೇದರೆ :—

" ಎಲೋ ಕುಂಭಯೋಗಿಯಾದ ನಿನಗೆ ನಮಸ್ಕಾರವು. ನೀನು ಮಿತ್ರಾವರುಣರ ಮಗನಾಗಿ 'ಕಾಶ' ಹೂವಿಗಿಂತ ಶುಭ್ರವಾಗಿರುವಿ. ಅತಾಪಿ ವಾತಾಪಿಗಳನ್ನು ಸಂಹರಿಸಿದಂಥವನೂ ಸಮುದ್ರವನ್ನು ಕುಡಿದಂಥವನೂ ಆದ ಎಲೋ ಅಗಸ್ತ್ಯನೇ ನಿನ್ನನ್ನು ನಾನು ಆಹ್ವಾನಿಸುತ್ತೇನೆ "

ಇವನ ವಾಸಸ್ಥಾನವು ಪೋಧೀಯಬೆಟ್ಟದಲ್ಲಿರುವಂತೆ ಪೂರ್ವ ಸಮುದ್ರದ ಆಗ್ನೇಯಮೂಲೆಯಲ್ಲಿರುವ 'ವೇದಾರಣ್ಯ' ಎಂಬಸ್ಥಳದಲ್ಲಿಯೂ ಇದ್ದು ಅಲ್ಲಿಯೂ ಅವನು ಸದಾ ವಾಸಿಸುತ್ತಾನೆಂದು ಜನರು ಭಾವಿಸಿ ಅವರು ಅವನನ್ನು ಪೂಜಿಸುತ್ತಾರೆ.

ಈ ಪ್ರಕಾರ ಅಗಸ್ತ್ಯನು ಶಿವಧರ್ಮವನ್ನು ದಕ್ಷಿಣ ಹಿಂದುಸ್ಥಾನದಲ್ಲಿ ನೆಲೆಗೊಳಿಸಿದ ಬಳಿಕ ಸಮುದ್ರವನ್ನು ದಾಟಿ ಪರದೇಶಗಳಲ್ಲಿಯೂ ಅದನ್ನು ಸ್ಥಾಪಿಸಲು ಉದ್ಯುಕ್ತನಾದನು.

ವಾಯು ಪುರಾಣ ಅಧ್ಯಾಯ ೪೮ ಇದರಲ್ಲಿ ಅವನು ಕೆಳಗೆ ಕಾಣಿಸಿದ ದ್ವೀಪಗಳಿಗೆ ಹೋದಂತೆ ಉಲ್ಲೇಖವಿದೆ. ಅವು ಯಾವವೆಂದರೆ:— ಬರ್ಹಿಣದ್ವೀಪ ಎಂದರೆ ಬೋರ್ನಿಯೋ, ಕುಶದ್ವೀಪ, ವರಾಹದ್ವೀಪ, ಶಾಖ್ಯದ್ವೀಪ, ಎಂಬವುಗಳು ಇರುತ್ತವೆ.

ಅವನು ಸಮುದ್ರವನ್ನು ದಾಟಿ ಕಾಂಬೋಡಿಯಾ ಎಂಬ ದೇಶಕ್ಕೆ ಹೋದದ್ದರ ಉಲ್ಲೇಖಗಳು ಇಲ್ಲಿಯ ಅನೇಕ ಶಾಸನಗಳಲ್ಲಿ ದೊರೆಯುತ್ತವೆ. ಈ ದೇಶದಲ್ಲಿ ಅಂಕೋರವಾಟ ಎಂಬ ಸ್ಥಳದಲ್ಲಿ ಈ ಶಾಸನಗಳಿರುತ್ತವೆ ಆ ಶಾಸನ ಒಂದರಲ್ಲಿ — " ಆರ್ಯದೇಶಲ್ಲಿ ಹುಟ್ಟಿದಂಥ ಬ್ರಾಹ್ಮಣನಾದ ಅಗಸ್ತ್ಯನು ಶಿವಪೂಜೆಯಲ್ಲಿ ನಿರತನಾಗಿ ತನ್ನ ಅಲೌಕಿಕ ಶಕ್ತಿಯಿಂದ ಕಾಂಬೋಡಿಯಾ ದೇಶಕ್ಕೆ ಬಂದು ಶ್ರೀ ಭದ್ರೇಶ್ವರನೆಂಬ ಶಿವಲಿಂಗವನ್ನು ಪೂಜಿಸಿದನು. ಮತ್ತು ಆ ದೇವರನ್ನು ಅವನು ಬಹು ದಿವಸ ಪೂಜಿಸಿ ಮೋಕ್ಷವನ್ನೈದಿದನು " ಎಂದು ಹೇಳಿದೆ.

ಅಗಸ್ತ್ಯನು ಈ ಪ್ರದೇಶದಲ್ಲಿದ್ದಾಗ್ಗೆ ಅಲ್ಲಿಯ ಒಬ್ಬ ರಾಜಕನ್ನಿಕೆಯನ್ನು ಮದುವೆಯಾಗಿ ಒಂದು ರಾಜವಂಶವನ್ನು ಸ್ಥಾಪಿಸಿದನೆಂದು ಮತ್ತೊಂದು ಶಿಲಾಶಾಸನದಿಂದ ತಿಳಿದುಬರುತ್ತದೆ. ಆ ಶಿಲಾಲೇಖದಲ್ಲಿ

ಹೇಳಿರುವದೇನಂದರೆಃ— "ಆರ್ಯಾದೇಶದಿಂದ ಬಂದಂಥ ಮತ್ತು ವೇದ ಗಳಲ್ಲಿ ಪಾರಂಗತನಾದಂಥ ಅಗಸ್ತ್ಯನೆಂಬ ಹೆಸರಿನಿಂದ ಪ್ರಸಿದ್ಧನಾದಂಥ ಬ್ರಾಹ್ಮಣನು 'ಮಹಿಸಿದ್ಧ' ಮನೆತನಕ್ಕೆ ಹೊಂದಿದ ಯಶೋವತಿ ಎಂಬ ಕನ್ನೆಯನ್ನು ಮದುವೆಯಾದನು. ಮತ್ತು ಆಕೆಯಿಂದ ನರೇಂದ್ರವರ್ಮ ನೆಂಬ ಎಂಬ ಮಗನನ್ನು ಪಡೆದನು. ಎಂದು ಬರೆದಿದೆ. ಈ ಸಂಗತಿಯು ಬೇರೆ ಅನೇಕ ಶಿಲಾಶಾಸನಗಳಲ್ಲಿರುವದು ಕಂಡು ಬಂದಿದೆ. ಕಾಂಬೋ ಡಿಯಾ ದೇಶದಲ್ಲಿ ಸುಂದರವಾದ ಅಸಂಖ್ಯ ದೇವಾಲಯಗಳು ಈಗಲೂ ಇದ್ದು ಅವುಗಳನ್ನು ಈ ರಾಜವಂಶಕ್ಕೆ ಸಂಬಂಧಿಸಿದ ರಾಜರೇ ಕಟ್ಟಿ ಸಿದ್ದಾರೆ.

ಕಾಂಬೋಡಿಯಾ ದೇಶದಂತೆಯೇ 'ಶ್ಯಾಮ' ದೇಶ ಎಂದರೆ ಸಿಯಾಮ ಪ್ರಾಂತದಲ್ಲಿಯೂ ಶಿವಾಲಯಗಳು ಈಗಲೂ ಇರುತ್ತವೆ. ಇವು ಗಳು ದಕ್ಷಿಣ ಹಿಂದುಸ್ತಾನದಲ್ಲಿರುವ ಶಿವಾಲಯಗಳಂತೆಯೇ ಇರುತ್ತವೆ. ಇದರಿಂದ ಈ ದೇಶದಲ್ಲಿದ್ದ ಶೈವಧರ್ಮವು ಹಿಂದುಸ್ತಾನದಿಂದಲೇ ಬಂದಿ ತೆಂದು ನಿರ್ವಿವಾದವಾಗಿ ಹೇಳಬಹುದು.

ಮಧ್ಯ ಜಾವಾದಲ್ಲಿ ದಕ್ಷಿಣ 'ಕೋಡೋ' ಎಂಬ ಹೆಸರಿನ ಪಟ್ಟಣ ವಿದ್ದು ಕ್ರಿ ಶಕ ೭೩೨ ಇಸ್ವಿಯ ಒಂದು ಸಂಸ್ಕೃತ ಶಿಲಾಶಾಸನವು ದೊರೆತಿದೆ. ಇದರಲ್ಲಿ ಈ ನಡುಗಡ್ಡೆಯನ್ನು ವಶಾಹತ್ತು ಮಾಡಿದವನು ಸಂಜಯನೆಂಬ ರಾಜನೆಂದು ಹೇಳಿದೆ. ಅದರಲ್ಲಿರುವ ವರ್ಣನೆ ಏನೆಂ ದರೆ— "ಜಾವಾ ಎಂಬ ಹೆಸರಿನ ಅತ್ಯುತ್ತಮ ದ್ವೀಪವು ಇಲ್ಲಿ ಇದೆ. ಇಲ್ಲಿ ಬಂಗಾರದ ಕಣಗಳು ಇವೆ. ಅಕ್ಕಿ ಮೊದಲಾದ ಧಾನ್ಯಗಳು ಹೇರಳವಾಗಿ ಬೆಳೆಯುತ್ತವೆ. ಈ ದ್ವೀಪದಲ್ಲಿ ಒಂದು ಸುಂದರವಾದ ಮತ್ತು ಅದ್ಭುತವಾದ ಶಿವಾಲಯವು ಇದ್ದು ಈ ಶಿವಾಲಯದಲ್ಲಿಯ ಮೂರ್ತಿಯನ್ನು ಪುಣ್ಯ ಭೂಮಿಯಾದ 'ಕುಂಜರಕುಂಜ' ದೇಶದ ಜನರು ಸ್ಥಾಪಿಸಿದರು"

ಈ ಕುಂಜರಕುಂಜ ದೇಶವು ದಕ್ಷಿಣ ಹಿಂದುಸ್ತಾನದಲ್ಲಿಯೇ ಇದ್ದಿರ ಲಿಕ್ಕೆ ಬೇಕು. ಕುಂಜರಕುಂಜ ಈ ದೇಶವು ಈಗಿನ ಆನೆಗೊಂದಿಯಾಗಿರ ಬಹುದು. ಹದಿಮೂರನೇ ಶತಮಾನದ ಕೆಲ ಶಿಲಾ ಶಾಸನಗಳಲ್ಲಿ 'ಕುಂಜರಕೋಣ' ಎಂಬ ದೇಶದ ಉಲ್ಲೇಖವಿದ್ದು, ಅವುಗಳಿಂದ ಈ

ಪ್ರದೇಶವು ಹಂಪಿಯ ಉತ್ತರಕ್ಕೆ ತುಂಗಭದ್ರಾ ನದೀ ತೀರದಲ್ಲಿರಬೇಕೆಂದು ತಿಳಿದುಬರುತ್ತದೆ. ಹರಿವಂಶದಲ್ಲಿ 'ಅಗಸ್ತ್ಯನ ಶುಭಕರವಾದ ಆಶ್ರಮವು ಕುಂಜರ ಪರ್ವತದಲ್ಲಿ ಇತ್ತು ಎಂದು ಬರೆದಿದೆ. ಇದರಿಂದ ಪಂಪಾಕ್ಷೇತ್ರದಲ್ಲಿ ಅಗಸ್ತ್ಯಾಶ್ರಮವು ಇದ್ದುದು ತಿಳಿದುಬರುತ್ತದೆ. ಇಲ್ಲಿಯೇ ಅವನು ವಾಸಿಸುತ್ತಿರುವಾಗ ಕರ್ನಾಟಕಸ್ಥರು ಸಮುದ್ರ ಮಾರ್ಗವಾಗಿ ಅಗಸ್ತ್ಯನೊಡನೆ ಜಾವಾದ್ವೀಪಕ್ಕೆ ಹೋಗಿ ಅಲ್ಲಿ ಶಿವಾಲಯವನ್ನು ಸ್ಥಾಪಿಸಿರಬಹುದೆಂಬ ಅನುಮಾನವು ಉಂಟಾಗುತ್ತದೆ.

ಈ ಮೇರೆಗೆ ಅಗಸ್ತ್ಯನು ಜಾವಾ ಮತ್ತು ಅದರ ನೆರೆಯ ದ್ವೀಪಗಳಲ್ಲಿ ಶಿವಧರ್ಮವನ್ನು ನೆಲೆಗೊಳಿಸಿ ಶಿವಾಲಯಗಳನ್ನು ಸ್ಥಾಪಿಸಿ ಧರ್ಮೋದ್ಧಾರ ಕಾರ್ಯ ಮಾಡಿದ್ದರಿಂದ ಸ್ವಾಭಾವಿಕವಾಗಿ ಅಲ್ಲಿಯ ಜನರು ಅವನಿಗೆ ದೇವಾವತಾರನೆಂದು ತಿಳಿಯುತ್ತಿದರು. ಪೂರ್ವ ಜಾವಾ ದ್ವೀಪದಲ್ಲಿ 'ದಿನಯ' ವೆಂಬ ಗ್ರಾಮವಿದೆ. ಅಲ್ಲಿ ಕ್ರಿ. ಶಕ ೭೬೦ ನೇ ಇಸ್ವಿಯ ಒಂದು ಶಿಲಾಲೇಖವಿದ್ದು ಅದರಲ್ಲಿ ಅಗಸ್ತ್ಯನ ಹೆಸರಿನಿಂದ ಒಂದು ಮೂರ್ತಿಯು ಮಾಡಲ್ಪಟ್ಟಿದೆಂಬ ಉಲ್ಲೇಖವಿದೆ. ಅಗಸ್ತ್ಯಮುನಿಗೆ ಈ ಪ್ರಾಂತದಲ್ಲಿ 'ಶಿವಗುರು' ಅಥವಾ 'ಭಟ್ಟಾರಕ ಗುರು' ಎಂಬ ಹೆಸರುಗಳು ಇರುತ್ತವೆ.

ಈ ಎಲ್ಲ ಸಂಗತಿಗಳಿಂದ ಅಗಸ್ತ್ಯನು ದಕ್ಷಿಣಹಿಂದುಸ್ಥಾನದಲ್ಲಿ ಶಿವಧರ್ಮವನ್ನು ನೆಲೆಗೊಳಿಸಿದ ಬಳಿಕ ಪರದೇಶಗಳಿಗೆ ಸಹ ಹೋಗಿ ಅಲ್ಲಿಯೂ ಅದನ್ನು ಪ್ರಕಾಶಗೊಳಿಸಿದನೆಂಬುದು ಸ್ಪಷ್ಟವಾಗುತ್ತದೆ.

ಬಹು ಪುರಾತನ ಕಾಲದಲ್ಲಿ ದಕ್ಷಿಣದೇಶದಲ್ಲಿ ಶೈವಧರ್ಮವು ಪ್ರಸಾರ ಹೊಂದಿದ ಹಾಗೆ ತೋರುತ್ತದೆ. ಅದು ಅಲ್ಲಿ ವೈಭವ ಸ್ಥಿತಿಯನ್ನು ಹೊಂದಿರಬೇಕು. ಅದು ಬಹು ದಿವಸಗಳ ವರೆಗೆ ಈ ದ್ವೀಪಾಂತರಗಳಲ್ಲಿ ಪ್ರಚಲಿತವಿದ್ದು ಮುಂದೆ ಮುಹಮ್ಮದೀ ಧರ್ಮವು ಅದರ ಸ್ಥಾನದಲ್ಲಿ ಪ್ರಸಾರಹೊಂದಿತು, ಅದು ಈಗಲೂ ಅಲ್ಲಿ ಇದೆ. ಆದರೆ ಈ ಮುಸಲ್ಮಾನರ ಮೇಲೆಯೂ ಹಿಂದೂ ಸಂಸ್ಕೃತಿಯು ಪರಿಣಾಮ ಮಾಡಿದ್ದು ಕಂಡುಬರುತ್ತದೆ ಅಲ್ಲಿಯ ಜನರು ಮುಸಲ್ಮಾನರು ಇದ್ದು ಅವರು ಈಗಲೂ 'ಸುಕರ್ಣ' 'ಸುದರ್ಶನ ಎಂಬ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ

ಸುಕರ್ಣ ಇದು ಈಗಿನ ಇಂಡೋನೇಶಿಯಾದ ಅಧ್ಯಕ್ಷನ ಹೆಸರು. ಅಲ್ಲಿಯ್ಯ ಮುಸಲ್ಮಾನರು 'ನೀಲಕಂಠ' 'ಶಿವ' ಎಂಬ ಹೆಸರುಗಳಿಂದ ಪರಮಾತ್ಮನನ್ನು ಭಜಿಸುವದೂ ಉಂಟು.

ಅಗಸ್ತ್ಯಮುನಿಯು ನಿರಾತಂಕವಾಗಿ ಸಮುದ್ರವನ್ನು ದಾಟಿ ಪರದೇಶಗಳಿಗೆ ಹೋದವನಾದ್ದರಿಂದ ಆವನು ಸಮುದ್ರವನ್ನು ಕುಡಿದುಬಿಟ್ಟ ನೆಂಬ ಆಖ್ಯಾಯಿಕೆಯು ಉಂಟಾಗಿರಬಹುದು

ಈ ಚರಿತ್ರೆಯನ್ನು ನಾವು ಮಿ|| ಓ. ಸಿ. ಗಂಗೋಳಿ ಎಂಬ ಪ್ರಸಿದ್ಧ ಬಂಗಾಲೀ ಪಂಡಿತರು 'ರೂಪಂ' ಎಂಬ ಹೆಸರಿನ ಬಂಗಾಲೀ ಭಾಷೆಯಲ್ಲಿ ಹೊರಡುವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ ಒಂದು ಮಹತ್ವದ ಲೇಖವನ್ನು ಆಧಾರವಾಗಿಟ್ಟುಕೊಂಡು ಬರೆದದ್ದಾಗಿದೆ. ಈ ಲೇಖವು ಮಹಾಕವಿಗಳಾದ ಸರ್ ರವೀಂದ್ರನಾಥ ಟಗೋರ ಇವರ ನಿವರ್ಶನದಲ್ಲಿ ಪ್ರಕಟವಾಗುತ್ತಲಿದ್ದ "ವಿಶ್ವಭಾರತಿ" ಎಂಬ ಪತ್ರಿಕೆಯ ೧೯೩೬ನೇ ಜುಲೈ ಸಂಚಿಕೆಯಲ್ಲಿ ಕೊಡಲ್ಪಟ್ಟಿರುತ್ತದೆ.

---

## ಅರಬಸ್ತಾನದ ಮಕ್ಕೇಶ್ವರ.

ಹೇಗೆ ಹಿಂದುಸ್ತಾನ ದೇಶದ ಆಗ್ನೇಯ ದಿಕ್ಕಿಗಿರುವ ದೇಶಗಳಲ್ಲಿ ಶೈವ ಧರ್ಮದ ಕುರುಹುಗಳು ಇವೆಯೋ, ಹಾಗೆಯೇ ಪಶ್ಚಿಮ ದೇಶಗಳಾದ ಅರಬಸ್ತಾನ ಮೊದಲಾದವುಗಳಲ್ಲಿಯೂ ಕೂಡ ಇರುತ್ತವೆಂಬುವರ ಬಗ್ಗೆ ಉಲ್ಲೇಖಗಳು ದೊರೆಯುತ್ತವೆ. ಈ ದೇಶಗಳಲ್ಲಿ ಇಸ್ಲಾಮಿ ಧರ್ಮವು ಈಗ ಪೂರ್ಣವಾಗಿ ನೆಲಿಸಿದ್ದರೂ ಅವಕ್ಕೂ ಮೊದಲು ಇಲ್ಲಿ ಹಿಂದೂ ಸಂಸ್ಕೃತಿಯು ಪ್ರಾದುರ್ಭವಿಸಿತ್ತೆಂದು ತೋರಿಬರುತ್ತದೆ. ಪ್ರಸಿದ್ಧ ಇತಿಹಾಸಕಾರನಾದ ಎಡವರ್ಡ ಗಿಬ್ಬನ್ನ ಈತನು ತನ್ನ ರೋಮನ್ನ ಸಾಮ್ರಾಜ್ಯದ ಇತಿಹಾಸದ ೫೦ ನೇ ಅಧ್ಯಾಯದಲ್ಲಿ ಹೇಳಿರುವದೇನಂದರೆ — ಅರಬರ ಮೊದಲಿನ ಕಾಲದ ಧರ್ಮವು ಹಿಂದೂ ಜನರಂತೆಯೇ ಇತ್ತು. ಅವರು ಸೂರ್ಯ, ಚಂದ್ರ, ಮತ್ತು ನಕ್ಷತ್ರಗಳನ್ನು ಪೂಜಿಸುತ್ತಿದ್ದರು. ಪ್ರಕಾಶಮಾನವಾದ ಈ ಗ್ರಹಗಳು ಪರಮಾತ್ಮನ ಪ್ರತ್ಯಕ್ಷರೂಪವೆಂದು ಇವರು ಭಾವಿಸುತ್ತಿದ್ದರು. ಸೃಷ್ಟಿಯು ಶಾಶ್ವತವಾದದ್ದು. ಅದಕ್ಕೆ

ಕೇಡಿಲ್ಲ, ಅದು ವ್ಯವಸ್ಥಿತವಾಗಿ ನಡಿಯುತ್ತದೆ. ಆದ್ದರಿಂದ ಅದರ ನಿಯಂತ್ರಕನಿಗೆ ಬುದ್ಧಿ ಎಂಬುದಿದೆ. ಅವರ ಪೃಥ್ವಿಯಲ್ಲಿರುವವರನ್ನು ಕಾಯುತ್ತಾನೆ. ಎಂಬಿವೇ ಮೊದಲಾದ ಹಿಂದೂಜನರ ವಿಚಾರಗಳು ಅವರಲ್ಲಿದ್ದುದು ಕಂಡುಬರುತ್ತದೆ. ಅರಬರು ಖಗೋಲ ಮತ್ತು ಜ್ಯೋತಿಷ ಶಾಸ್ತ್ರಗಳನ್ನು ಸಹ ಹಿಂದೂ ಜನರಿಂದಲೇ ಕಲಿತುಕೊಂಡಿರಬಹುದೆಂದು ಅನುಮಾನವು ಉಂಟಾಗಲು ಪ್ರಬಲ ಕಾರಣಗಳಿವೆ.

ಆದರೆ ಅರಬಸ್ತಾನದಲ್ಲಿಯ ನಿವಾಸಿಗಳು ನಾಗರಿಕತೆಯಲ್ಲಿ ಮುಂದು ವರಿದವರಿರಲಿಲ್ಲ. ಮಕ್ಕಾಪಟ್ಟಣದಲ್ಲಿ ಲಿಂಗಾಕೃತಿಯುಳ್ಳ ಒಂದು ಪ್ರತಿಮೆ ಇದ್ದು, ಅದು ಇದ್ದ ದೇವಾಲಯವು ಅವರಿಗೆ ಪವಿತ್ರಸ್ಥಾನವಾಗಿದ್ದಿತು. ಅದರ ಇತಿಹಾಸವು ಕ್ರಿಸ್ತಶಕದ ಪೂರ್ವದಲ್ಲಿಯೇ ಪ್ರಾರಂಭವಾಗುತ್ತದೆ. ಅದರಲ್ಲಿ ಕಪ್ಪುಕಾಂತಿಯುಳ್ಳ ಒಂದು ಲಿಂಗ ಪ್ರತಿಮೆ ಇದ್ದು ಅದನ್ನು ಅರ ಬರು ಬಹು ಭಕ್ತಿಯಿಂದ ಪೂಜಿಸುತ್ತಿದ್ದರು. ಮೈಲಿಗೆ ಬಟ್ಟೆಯನ್ನು ಹೊದ್ದುಕೊಂಡು ಅದನ್ನು ಸಮೀಪಿಸುತ್ತಿರಲಿಲ್ಲ. ಅವರು ಅದನ್ನು ಅನೇಕ ರೀತಿಯಿಂದ ಪೂಜಿಸು ತ್ತಿದ್ದರು. ಮುಹಮ್ಮದ ಪೈಗಂಬರನ ಹಿಂದಿನ ಪೂರ್ವ ಜರು ಈ ದೇವಾಲಯದ ಪೂಜಾರಿಗಳಾಗಿ ಕೆಲಸಮಾಡುತ್ತಿದ್ದರು. ಈ ಪ್ರತಿಮೆಯ ಹೆಸರು 'ಅಲ್ ಲಾತ್' ಅಥವಾ 'ಅಲ್ ಉಜಾ' ಎಂಬು ದಾಗಿತ್ತು. ಅರಬರು ಕಾಠೇವಾಡಕ್ಕೆ ಬಂದಾಗ್ಗೆ ಅಲ್ಲಿದ್ದ ಸೋಮನಾಥ ದೇವಾಲಯದಲ್ಲಿದ್ದ ಲಿಂಗಮೂರ್ತಿಯನ್ನು ಸಹ "ಲಾತ್" ಎಂಬ ಹೆಸರಿ ನಿಂದ ಕರೆಯುತ್ತಿದ್ದದ್ದು ಕಂಡುಬರುತ್ತದೆ.

ಈಗಿನ ಇಸ್ಲಾಮು ಧರ್ಮದಲ್ಲಿ ಮೂರ್ತಿ ಪೂಜೆಯು ಇರುವದಿಲ್ಲ. ಆದರೆ ಮುಸ್ಲೀಮರು ಮಕ್ಕಾ ಮಶೀದೆಗೆ ಹೋದ ಕಾಲದಲ್ಲಿ ಅಲ್ಲಿ ಅವರು ಈಗ ಅನುಸರಿಸುವ ಧಾರ್ಮಿಕ ಪದ್ಧತಿಗಳಲ್ಲಿ ಪುರಾತನ ಕಾಲ ದಲ್ಲಿ ಅರಬರು ತಮ್ಮ ಲಿಂಗಾಲಯಕ್ಕೋಸ್ಕರ ಅನುಸರಿಸುತ್ತಿದ್ದವುಗಳನ್ನು ಕೆಲಮಟ್ಟಿಗೆ ಕಾಣಬಹುದಾಗಿದೆ. ಮೊದಲು ಅಲ್ಲಿದ್ದ ಕಪ್ಪು ಲಿಂಗಾ ಕಾರ ಮೂರ್ತಿಯನ್ನು ಈಗಲೂ ಮಕ್ಕಾ ಮಶೀದಿಯಲ್ಲಿ ಇಟ್ಟಿರುವರು. ಅದನ್ನು ಮುಸ್ಲೀಮರು ಚುಂಬಿಸಿ ಅದಕ್ಕೋಸ್ಕರ ತಮ್ಮ ಭಕ್ತಿಭಾವ ವನ್ನು ಈಗಲೂ ತೋರಿಸುತ್ತಾರೆ.

ಹಿಂದುಸ್ತಾನದಲ್ಲಿ ವೇದಕಾಲದಲ್ಲಿ ಅಗ್ನಿ, ವರುಣ ಮೊದಲಾದ ನಿಸರ್ಗ ಶಕ್ತಿಗಳ ಪೂಜೆಯು ಇದ್ದು ಹಿಂಸಾತ್ಮಕ ಯಜ್ಞ ಕಾರ್ಯಗಳು ಅನಿರ್ಬಂಧವಾಗಿ ಅವರಿಂದ ನಡಿಸಲ್ಪಡುತ್ತಿದ್ದವು. ಅದೇ ಕಾಲದಲ್ಲಿ ಶಿವಶಕ್ತಿಗಳ ಆರಾಧನೆಯು ಕೂಡ ಈ ಲಿಂಗ ಪೂಜೆಯ ಮೂಲಕ ನಡೆಯುತ್ತಲಿದ್ದವು. ಇದೇ ಕ್ರಮವು ಅರಬಸ್ತಾನದಲ್ಲಿಯೂ ಉಂಟಾಗಿರಬಹುದು. ಈ ಪ್ರದೇಶದಲ್ಲಿ ಶಿವಚಿನ್ಹವು ಹೇಗೆ ಬಂದಿತೆಂಬುವರ ಬಗ್ಗೆ ಕೆಲವು ದಂತಕಥೆಗಳು ನಮ್ಮ ದೇಶದಲ್ಲಿ ಪ್ರಚಲಿತವಿದ್ದು ಇವುಗಳನ್ನು ವಾಚಕರು ಲಕ್ಷಿಸುವದು ಅವಶ್ಯವಿರುತ್ತದೆ.

## ಶಿಶುನಾಗ.

ಪಾಂಡವ ವಂಶದ ಮಗಧ ರಾಜರು ಪಾಟಲಿಪುತ್ರ ಅಂದರೆ ಪಾಟಣಾದಲ್ಲಿ ರಾಜ್ಯವಾಳುತ್ತಿದ್ದರು. ಅವರ ವಂಶದಲ್ಲಿ ಶಿಶುನಾಗನೆಂಬ ರಾಜನು ಜನಿಸಿದನು. ಅವನು ಧಾರ್ಮಿಕ ಬುದ್ಧಿಯುಳ್ಳವನಾಗಿ ಅನೇಕ ಯಜ್ಞಯಾಗಾದಿಗಳನ್ನು ನೆರವೇರಿಸಿದನು. ಹೀಗಿರುವಲ್ಲಿ ನೆರೆ ಪ್ರಾಂತದಲ್ಲಿ ಚೇದಿವಂಶದ ರಾಜರು ಆಳುತ್ತಿದ್ದರು. ಅವರಿಗೂ ಮಗಧ ರಾಜರಿಗೂ ಮನಸ್ತಾಪಗಳಿದ್ದು ಅವರಲ್ಲಿ ಯಾವಾಗಲೂ ಯುದ್ಧಗಳು ನಡೆಯುತ್ತಿದ್ದವು. ಒಂದು ಕಾಲದಲ್ಲಿ ಚೇದಿವಂಶದ ರಾಜರು ಪಾಟಲಿಪುತ್ರ ನಗರವನ್ನು ಕೈವಶ ಮಾಡಿಕೊಂಡು ಅದನ್ನು ಲೂಟಿ ಮಾಡಿದರು. ಆಗ ಶಿಶುನಾಗನು ತನ್ನ ರಾಜ್ಯವನ್ನು ಬಿಟ್ಟುಕೊಟ್ಟು ಸಿಂಧೂನದಿಯನ್ನು ದಾಟಿ ಅದರ ಪಶ್ಚಿಮಕ್ಕೆ ಒಂದು ರಾಜ್ಯವನ್ನು ಸ್ಥಾಪಿಸಿದನು. ಆದರೆ ಅವನು ಅಲ್ಲಿ ಬಹಳ ದಿವಸಗಳಿರದೆ ಅವನು 'ಅದರ ಪಶ್ಚಿಮಕ್ಕಿರುವ ಮಕ್ಕಾ ಪ್ರಾಂತಕ್ಕೆ ಹೋಗಿ ಅಲ್ಲಿ ಆಳಹತ್ತಿದನು. ಅವನೇ ಮಕ್ಕೇಶ್ವರ ಲಿಂಗವನ್ನು ಸ್ಥಾಪಿಸಿದನು. ಅದಕ್ಕೋಸ್ಕರ ಅವನು ಅಲ್ಲಿ ಒಂದು ಸುಂದರ ದೇವಾಲಯವನ್ನು ಕಟ್ಟಿಸಿದನು. ಅದರಲ್ಲಿ ಅನೇಕ ಸುಂದರ ಮೂರ್ತಿಗಳು ಅವನಿಂದ ರಚಿಸಲ್ಪಟ್ಟವು. ಈ ದೇವಾಲಯದ ಖ್ಯಾತಿಯು ಈ ಶಾಸನ ಮೂಲಕ ಎಲ್ಲ ಕಡೆಗೂ ಹಬ್ಬಿತು. ಅಸಂಖ್ಯ ಯಾತ್ರಿಕರು ಅಲ್ಲಿಗೆ ಬಂದು, ಅಲ್ಲಿದ್ದ ಲಿಂಗಮೂರ್ತಿಯನ್ನು ಸಂದರ್ಶಿಸುವರು. ಶಿಶುನಾಗನ ತರುವಾಯ ಅವನ ವಂಶಜರು ಅಲ್ಲಿಯೇ ರಾಜ್ಯವಾಳಹತ್ತಿದರು. ಈ

ಮಕ್ಕೇಶ್ವರ ಲಿಂಗದ ಪೂಜೆಯನ್ನು ಮಹಮ್ಮದ ಪೈಗಂಬರನ ಪೂರ್ವ ಜರು ಅವನು ಇಸ್ಲಾಮು ಧರ್ಮವನ್ನು ಸ್ಥಾಪಿಸುವ ವರೆಗೂ ನಡಿಸುತ್ತ ಬಂದರು.

ಮಹಮ್ಮದ ಪೈಗಂಬರನು ತನ್ನ ಇಸ್ಲಾಮು ಧರ್ಮವನ್ನು ನೆಲೆಗೊಳಿಸಿದ ಬಳಿಕ ಅವನು ನಾಡಿನಲ್ಲಿದ್ದ ಈ ಮೂರ್ತಿ ಪೂಜೆಯನ್ನು ನಿಲ್ಲಿಸಿದನು. ಮೊದಲಿದ್ದ ಮೂರ್ತಿಗಳನ್ನು ಒಡೆದು ಹಾಕಿಸಿದನು. ಆದರೆ ಶಿಶುನಾಗನು ಸ್ಥಾಪಿಸಿದ ಮಕ್ಕೇಶ್ವರ ಲಿಂಗವು ಮಾತ್ರ ಮಕ್ಕಾಮಸೀದೆಯಲ್ಲಿ ಇಡಲ್ಪಟ್ಟಿತು. ಯಾತ್ರಿಕರು ಅದರ ಚುಂಬನ ಮಾಡುತ್ತಿದ್ದರು. ಅದರ ಪೂಜೆಯು ಮಾತ್ರ ನಡಿಯುತ್ತಿರಲಿಲ್ಲ. ಕೆಲವೊಂದು ಕಾಲದಲ್ಲಿ ಈ ಲಿಂಗವು ಯಾರಿಗೂ ಕಾಣದಂತೆ ಗುಪ್ತವಾಗಿ ಇಡಲ್ಪಟ್ಟಿತ್ತೆಂದು ತಿಳಿದು ಬರುತ್ತದೆ.

ಮುಂದೆ ಮ್ಲೇಂಚ್ಛರ ಪ್ರಾಬಲ್ಯವು ಆಯಾ ದೇಶಗಳಲ್ಲಿ ಹೆಚ್ಚುತ್ತ ಹೋಗಿ ಅವರು ಅಗ್ನಿ ಪೂಜಕರು ವಾಸವಾಗಿದ್ದ ಇರಾಣವನ್ನು ಮತ್ತು ಶೈವ ಸಾಂಪ್ರದಾಯವಿದ್ದ ಅಫಗಾಣಿಸ್ತಾನ, ಸಿಂಧೂ ದೇಶಗಳನ್ನು ಗೆದ್ದು ಅವುಗಳನ್ನು ತಮ್ಮ ಪಾದಾಕ್ರಾಂತ ಮಾಡಿಕೊಂಡರು. ಆದ್ದರಿಂದ ಈ ದೇಶಗಳಲ್ಲಿ ಇಸ್ಲಾಂ ಧರ್ಮವು ಬಲಿಯಹತ್ತಿತು. ಇದೇ ಕಾಲಕ್ಕೆ ಶಕ, ಹೂಣ ಮೊದಲಾದ ಕಾಡು ಜನರು ದೇಶದ ಒಳನುಗ್ಗಿದರು. ಈ ಕಠಿಣ ಕಾಲಗಳಲ್ಲಿ ಶಾಲಿವಾಹನ ಮತ್ತು ವಿಕ್ರಮಾದಿತ್ಯರು ಜನಿಸಿ ಮ್ಲೇಂಚ್ಛರನ್ನುಗೆದ್ದು ದೇಶವನ್ನು ಸಂರಕ್ಷಿಸಿದರು.

ವಿಕ್ರಮಾದಿತ್ಯನ ವಂಶದಲ್ಲಿ ಭೋಜರಾಜನು ಉದಿಸಿ ಅವನು ಉಜ್ಜಯಿನಿಯಲ್ಲಿ ರಾಜ್ಯವಾಳುತ್ತಿದ್ದನು. ಅವನು ಮಹಮ್ಮದೀಯರ ಉಪಟಳವನ್ನು ಸಹಿಸಲಾರದೆ ೧೦ ಸಾವಿರ ಶೂರ ಸೈನಿಕರೊಡನೆ ಸಿಂಧೂ ನದಿಯನ್ನು ದಾಟಿ ಇಲ್ಲಿದ್ದ ಮ್ಲೇಂಚ್ಛರನ್ನು ಶಿಕ್ಷಿಸಿ ಅವರ ಮೂಲಸ್ಥಾನವಾದ ಮರುಭೂಮಿಗೆ ( ಅರಬ್ಬೀ ದೇಶಕ್ಕೆ ) ನುಗ್ಗಿದನು ಮತ್ತು ಅಲ್ಲಿ ಮಕ್ಕೇಶ್ವರನಿದ್ದ ಸ್ಥಾನವನ್ನು ಸಂದರ್ಶಿದನು. ಆಗ ಮಕ್ಕೇಶ್ವರನು ಅಶರೀರ ವಾಣಿಯಿಂದ — " ಎಲೈ ಭೋಜರಾಜನೇ ಬಾಹ್ಲೀಕ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಈ ಭೂಮಿಯು ಮ್ಲೇಂಚ್ಛರಿಂದ ದೂಷಿತವಾಗಿರುತ್ತದೆ. ಈ ದಾರುಣ ದೇಶದಲ್ಲಿ ಆರ್ಯಧರ್ಮವು ಸ್ವಲ್ಪವೂ

ಇರುವದಿಲ್ಲ. ಆದ್ದರಿಂದ ನೀನು ಮಹಾ ಕಾಲೇಶ್ವರನಿರುವಲ್ಲಿಗೆ ( ಉಜ್ಜ ಯಿನಿಗೆ ) ಹೋಗು ಎಂದು ಅಪ್ಪಣೆ ಮಾಡಿದನು. ಆಗ ಭೋಗರಾಜನು ಸ್ವದೇಶಕ್ಕೆ ಹಿಂದಿರುಗಿದನು.

ಮಕ್ಕೇಶ್ವರ ಲಿಂಗವ ಪ್ರಖ್ಯಾತಿಯು ದಕ್ಷಿಣ ಹಿಂದುಸ್ತಾನದಲ್ಲಿ ಅನೇಕ ಕಡೆಗೆ ಇತ್ತೆಂದು ತೋರುತ್ತದೆ. ಆದ್ದರಿಂದ ಕೆಲವು ಶಿವಶರಣರು ಮುಖ್ಯವಾಗಿ ಮಳೆಯರಾಜ, ಮಲ್ಲನೃಪ ಎಂಬವರು ಈ ದೇಶಕ್ಕೆ ಹೋಗಿ ಮಕ್ಕೇಶ್ವರ ಲಿಂಗದರ್ಶನ ಹೊಂದಿದರೆಂದು ಆಖ್ಯಾಯಿಕೆಗಳಿವೆ. ಹಾಗೆಯೇ ತಿರುವಾಂಕೂರಿನ ರಾಜರ ಪೂರ್ವಜನೊಬ್ಬನು ಈ ನಾಡಿಗೆ ಹೋದಹಾಗೆ ಅಲ್ಲಿ ಐತಿಹ್ಯಗಳಿವೆ.

ದಕ್ಷಿಣ ಹಿಂದುಸ್ತಾನದಲ್ಲಿ ಮುಖ್ಯವಾಗಿ ಕರ್ನಾಟಕ, ತಮಿಳದೇಶ, ಮತ್ತು ಗುಜರಾಥ ಈ ದೇಶಗಳಿಗೂ ಅರಬಸ್ತಾನ ಇಜಿಪ್ತ ದೇಶಗಳಿಗೂ ನಿಕಟ ಸಂಬಂಧವಿದೆ. ಆದ್ದರಿಂದ ರೋಮನ್ನರ ನಾಣ್ಯಗಳು ದ್ರಾವಿಡದೇಶ ದಲ್ಲಿ ದೊರೆತಿರುತ್ತವೆ. ಮತ್ತು ಕ್ರಿಸ್ತಶಕದ ಪೂರ್ವದಲ್ಲಿ ೨ ಶತಮಾನಗ ಳಾಚೆ ಒಂದು ಗ್ರೀಕ ನಾಟಕವಲ್ಲಿ ಕನ್ನಡ ನುಡಿಗಳು ಇರುವನು ಕಂಡು ಬಂದಿದೆ. ಇದರಂತೆ ಕೆಲವು ಶೈವ ಸಾಂಪ್ರದಾಯಗಳು ಇಜಿಪ್ತ ಮತ್ತು ಅರಬಸ್ತಾನ ದೇಶಗಳಲ್ಲಿ ದೊರೆತ.ದಕ್ಕೋಸ್ಕರ ನಾವು ಆಶ್ಚರ್ಯಪಡುವ ಕಾರಣವಿಲ್ಲ.

ಈ ಎಲ್ಲ ಸಂಗತಿಗಳನ್ನು ನಿದರ್ಶಿಸಿದಲ್ಲಿ ಶೈವಧರ್ಮ ಮತ್ತು ಅದರ ಸಂಸ್ಕೃತಿ ಒಂದು ಕಾಲದಲ್ಲಿ ಬಹು ದೂರದ ವರೆಗೆ ಹಬ್ಬಿತ್ತೆಂದು ತಿಳಿಯಲು ಯಾವ ಪ್ರತ್ಯವಾಯವಿರುವದಿಲ್ಲ.

ಶಿವಶರಣರ ಚರಿತ್ರೆಗಳ ೩ನೆಯ ಭಾಗವನ್ನು ನಾವು ಇಲ್ಲಿಗೆ ಪೂರ್ತಿ ಗೊಳಿಸಿ ಮುಂದೆ ೪ನೇ ಭಾಗವನ್ನು ಪ್ರಾರಂಭಿಸುವೆವು. ಹೀಗೆ ಪೂರ್ತಿ ಗೊಳಿಸುವ ಪೂರ್ವದಲ್ಲಿ ಜಂಗಮರು ಶೈವ ಮತ್ತು ವೀರಶೈವ ಸಂಸ್ಕೃ ತಿಯು ಪ್ರಸಾರಕ್ಕೋಸ್ಕರ ಮಾಡಿದ ಪ್ರಯತ್ನಗಳನ್ನು ಕುರಿತು ನಾವು ವಿವೇ ಚಿಸಲೆಣಿಸುವೆವು. ನಾವು ಪ್ರಕಟಿಸಿದ ಶಿವಶರಣರ ಚರಿತ್ರೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಲ್ಲಿ ಜಂಗಮವರ್ಗದರು ಈ ವಿಷಯವಾಗಿ ಘನತರವಾದ ಕಾರ್ಯಗಳನ್ನು ಮಾಡಿದ್ದು ವಾಚಕರ ಲಕ್ಷಕ್ಕೆ ಬರದೆ ಇರಲಾರದು. ಇವುಗಳನ್ನು ನಾವು ಇಲ್ಲಿ ವಿವರಿಸುವೆವು.

ನಾವು ಈ ಶಿವಶರಣರ ಚರಿತ್ರೆಗಳ ೧ ನೇ ಭಾಗದಲ್ಲಿ ೫೧ ಜನರ ಚರಿತ್ರೆಗಳನ್ನು ಪ್ರಸಿದ್ಧಿಸಿದ್ದೇವೆ. ಅವರಲ್ಲಿ ಅನೇಕ ಶಿವಶರಣರೂ, ವಚನಕಾರರೂ, ಸ್ತ್ರೀಯರೂ ಬಾಲ ಬಾಲಿಕೆಯರೂ ಇದ್ದಾರೆ. ಅವರೆಲ್ಲರೂ ಶಿವಾನುಭವಿಗಳಾಗಿ ಶಿವಾನುಭವದ ತತ್ವಗಳಂತೆ ಆಚರಿಸಿದ್ದಾರೆ. ಇದಕ್ಕೋಸ್ಕರ ಅವರು ಅನೇಕ ತರದ ಹಿಂಸೆಗೆ ಸಹ ಒಳಗಾಗಿದ್ದಾರೆ. ಹೀಗಿದ್ದರೂ ಕೂಡಾ ಅವರು ತಮ್ಮ ನಿಷ್ಠೆಯನ್ನು ಬಿಡದೆ ಅಚಲಮನಸ್ಕರಾಗಿ ತಮ್ಮ ಕರ್ತವ್ಯವನ್ನು ಮಾಡಿದ್ದು ಕಂಡುಬರುತ್ತದೆ.

ಈ ಚರಿತ್ರೆಗಳ ೨ ನೇ ಭಾಗದಲ್ಲಿ ೬೩ ಜನ ಶಿವಶರಣ ಶರಣೆಯರ ಚರಿತ್ರೆಗಳು ಬಂದಿವೆ. ಹೀಗೆ ಇವರು ಒಟ್ಟು ೧೧೪ ಜನರಾಗುತ್ತಿದ್ದು ಇವರಲ್ಲಿ ೫೫ ಜನ ವಚನಕಾರರಿದ್ದಾರೆ. ಈ ಮಹಾನುಭಾವರ ಮಹತ್ಕಾರ್ಯಗಳನ್ನು ಕುರಿತು ನಾವು ೨ ನೇ ಭಾಗದ ಪ್ರಸ್ತಾವನೆಯಲ್ಲಿ ಸವಿಸ್ತಾರವಾಗಿ ನಿರೂಪಿಸಿದ್ದೇವೆ. ಇವರಲ್ಲಿ ಈ ಶಿವಶರಣ ಸಾಮಾನ್ಯ ನಿರೂಪಣೆಗಳು ಬಂದಿರುತ್ತವೆ.

ಈಗಿನ ೩ ನೇ ಭಾಗದ ಗ್ರಂಥದಲ್ಲಿ ೨೮ ಜನ ಶಿವಶರಣರ ಚರಿತ್ರೆಗಳು ಮಾತ್ರ ಬಂದಿವೆ. ಹೀಗೆ ೧೪೨ ಜನ ಶಿವಶರಣರ ಚರಿತ್ರೆಗಳು ಈ ಮೂರುವಿಭಾಗಗಳಲ್ಲಿ ಬಂದಿವೆ. ಇವರು ಕೇವಲ ಕರ್ನಾಟಕ ಮಾತ್ರವಲ್ಲ, ಆಂಧ್ರದೇಶ, ಗುಜರಾಥ, ಸಿಂಧೂದೇಶ ಇವುಗಳಲ್ಲಿಯೂ ಪರದೇಶಗಳಾದ ಅಫಗಾಣಿಸ್ಥಾನ ಇಂಡೋನೇಶಿಯಾ ಅರಬಸ್ಥಾನ ಇಲ್ಲಿಯೂ ಕೂಡ ಪ್ರಸಿದ್ಧರಾಗಿದ್ದಾರೆ. ಶೈವ ಸಂಸ್ಕೃತಿಯು ಒಂದುಕಾಲದಲ್ಲಿ ಹಿಂದುಸ್ತಾನ ಮಾತ್ರವಲ್ಲ, ಪರದೇಶಗಳಲ್ಲಿಯೂ ಕೂಡಾ ಪಸರಿಸಿತ್ತೆಂದು ಕಂಡುಬರುತ್ತದೆ.

ಇನ್ನು ಮುಂದೆ ನಾವು ಈ ಶಿವಶರಣರ ಚರಿತ್ರೆಗಳ ೪ ನೇ ಭಾಗವನ್ನು ಪ್ರಾರಂಭಿಸುವೆವು. ಇವರಲ್ಲಿ ರೇವಣ ಸಿದ್ಧೇಶ್ವರ, ಮರುಳ ಸಿದ್ಧೇಶ್ವರ, ಏಕೋರಾಮ ಮೊದಲಾದವರ ಮತ್ತು ಬಸವೇಶ್ವರನ ಸಮಕಾಲೀನರಾದ ಅಲ್ಲಮಪ್ರಭು, ಸಿದ್ಧರಾಮ, ಮಡಿವಾಳ ಮಾಚಿದೇವ, ಕಿನ್ನರೀ ಬ್ರಹ್ಮಯ್ಯ ಮಹಾದೇವಿಯಕ್ಕ ಮೊದಲಾದವರ ಚರಿತ್ರೆಗಳನ್ನು ಕೊಡು

ವೆವು. ಮುಂದೆ ೫ ನೇ ಭಾಗದಲ್ಲಿ ಕೇವಲ ಬಸವೇಶ್ವರನ ಚರಿತ್ರೆಯನ್ನು ಪ್ರಸಿದ್ಧಿಸಬೇಕೆಂದು ಸಂಕಲ್ಪಿಸಿದ್ದೇವೆ.

ಈ ವರೆಗೆ ಪ್ರಸಿದ್ಧವಾದ ಚರಿತ್ರೆಗ್ರಗಳನ್ನು ನಾವು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಜಂಗಮವರ್ಗದವರು ವೀರಶೈವ ಧರ್ಮ ಪ್ರಸಾರಕಾರ್ಯದಲ್ಲಿ ಕೆಲವೊಂದು ಮಹತ್ವದ ಭಾಗವನ್ನು ವಹಿಸಿ ಕಾರ್ಯವಾಡುತ್ತ ಬಂದರೆಂಬುದು ತಿಳಿದುಬರುತ್ತದೆ. ಇದನ್ನು ನಾವು ಇಲ್ಲಿ ಸ್ಥೂಲ ತೆರನಾಗಿ ವಿವರಿಸುತ್ತೇವೆ.

## ಜಂಗಮರು

ಜಂಗಮರೆಂಬ ಕೆಲವೊಂದು ವರ್ಗವು ಬಸವೇಶ್ವರನಕಿಂತಲೂ ಮೊದಲು ಸಹ ಇತ್ತೆಂದು ಈ ಶಿವಶರಣರ ಚರಿತ್ರೆಗಳಿಂದ ತಿಳಿದುಬರುತ್ತದೆ. ಹಿಂದುಸ್ಥಾನದಲ್ಲಿ ಬೇರೆ ಬೇರೆ ಪಂಥಗಳಲ್ಲಿ ಹೇಗೆ ಧಾರ್ಮಿಕ ವರ್ಗಗಳು ಕಂಡುಬರುತ್ತವೆಯೋ ಹಾಗೆಯೇ ವೀರಶೈವರಲ್ಲಿಯೂ ಜಂಗಮರೆಂಬ ಮಹತ್ವದ ವರ್ಗವು ಪುರಾತನ ಕಾಲದಿಂದಲೂ ಇತ್ತೆಂದು ಕಂಡುಬರುತ್ತದೆ. ಶಂಕರಾಚಾರ್ಯನು ಜಂಗಮರನ್ನು ತನ್ನ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. ಹಾಗೆಯೇ ಶೈವನಾದ ಬಾಣ ಕವಿಯೂ ಕೂಡ ಅವರನ್ನು ವರ್ಣಿಸಿದ್ದಾನೆ. ಜಂಗಮ ಮತವೆಂತಲೂ ಉಲ್ಲೇಖಗಳು ಪರಧರ್ಮಿಯರ ಗ್ರಂಥಗಳಲ್ಲಿ ದೊರೆಯುತ್ತವೆ.

### ಜಂಗಮರ ಹೆಸರುಗಳು.

ಆದರೆ ಜಂಗಮರಿಗೆ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಹೆಸರುಗಳು ಇದ್ದುದು ಕಂಡುಬರುತ್ತದೆ. ಇವುಗಳನ್ನು ಕೆಳಗೆ ವಿವರಿಸಿದ್ದೇವೆ.

ಪುರಾತರು, ಪುರಾತನರು, ಆದ್ಯರು :- ವಚನಕಾರರು ಬಹುಕಡೆಗೆ ಜಂಗಮರನ್ನು ಈ ಹೆಸರುಗಳಿಂದ ಕರೆದಿದ್ದಾರೆ. ತಮಿಳ ದೇಶದಲ್ಲಿ ಅನೇಕ ಧಾರ್ಮಿಕ ಪುರುಷರು ಆಗಿ ಹೋಗಿದ್ದಾರೆ. ಅವರಿಗೆ ಪುರಾತನರೆಂಬ ಹೆಸರು ಇದೆ. ಅವರು ೬೩ ಜನರು ಇದ್ದಾರೆ. ಪೆರಿಯ-ಪುರಾಣವೆಂಬ ತಮಿಳ ಗ್ರಂಥದಲ್ಲಿ ಅವರ ಚರಿತ್ರೆಗಳಿವೆ. ಅವರು ಶಿವಭಕ್ತ

ರಾಗಿ ಆಗಮ ಧರ್ಮವನ್ನು ಪಾಲಿಸುತ್ತಿದ್ದದರಿಂದ ವೀರಶೈವರು ಅವರನ್ನು ಮನ್ನಿಸುತ್ತ ಬಂದಿದ್ದಾರೆ. ವೀರಶೈವ ವಚನಕಾರರು ತಮ್ಮ ವಚನಗಳಲ್ಲಿ ಜಂಗಮರನ್ನು 'ಪುರಾತ'ರೆಂಬ ಹೆಸರಿನಿಂದ ಕರೆದಿದ್ದಾರೆ. ತಮಿಳು ದೇಶದ ಪುರಾತನರಿಗೋಸ್ಕರ ಅವರು ವಹಿಸಿದ ಭಕ್ತಿಯ ಮೂಲಕ ಅವರು ಜಂಗಮರನ್ನು ಹೀಗೆ ಕರೆದಿರಬಹುದು.

ಪ್ರಮಥರು, ಗಣಂಗಳು, ಗಣಾಧೀಶ್ವರರು — ಗ್ರಂಥಕಾರರು ಈ ಹೆಸರುಗಳಿಂದಲೂ ಜಂಗಮರನ್ನು ಸಂಬೋಧಿಸಿದ್ದಾರೆ. ಜಂಗಮರಲ್ಲಿ ಅನೇಕರು ತಮ್ಮ ವಿದ್ವತ್ತೆಯ ಮೂಲಕ ಜನರ ಮನ್ನಣೆಗೆ ಪಾತ್ರರಾದರು. ಆಗ ಅವರು ಪರಮೇಶ್ವರನ ನೆರೆಯಲ್ಲಿರುವ ಗಣಗಳು ಅಥವಾ ಪ್ರಮಥರು ಜನರ ಉದ್ಧಾರಾರ್ಥವಾಗಿ ಪೃಥ್ವಿಯಲ್ಲಿ ಹೀಗೆ ಜನ್ಮ ತಾಳಿದರೆಂದು ಜನರು ಭಾವಿಸಿ ಅವರನ್ನು ಪ್ರಮಥರೆಂತಲೂ ಗಣಗಳೆಂತಲೂ ಕರೆದಿರಬಹುದು.

**ಶರಣರು:**— ಷಟ್ ಸ್ಥಲಗಳಲ್ಲಿ ಶರಣಸ್ಥಲವೆಂದಿದ್ದು ಇದು ಐನೆಯ ಸ್ಥಲವು. ಇದು ಐಕ್ಯಸ್ಥಲದ ಹಿಂದಿನ ಸ್ಥಲವು. ಶರಣಸ್ಥಲದವರು ಜ್ಞಾನಿಗಳು. ಆದ್ದರಿಂದ ಜಂಗಮರಲ್ಲಿ ಜ್ಞಾನಿಗಳಾದವರನ್ನು ವಚನಕಾರರು ಹೀಗೆ ಶರಣರೆಂದು ಕರೆದಿದ್ದಾರೆಂದು ತೋರುತ್ತದೆ.

**ಒಡೆಯರು, ಮಹಂತರು:**— ಜಂಗಮರು ಅನೇಕ ಕಡೆಗೆ ಮಠಗಳನ್ನು ಸ್ಥಾಪಿಸಿದ್ದು ಕಂಡುಬರುತ್ತದೆ. ಈ ಮಠಗಳಲ್ಲಿ ಅಧಿಕಾರಿಗಳಾಗಿ ನಿಯೋಜಿಸಲ್ಪಟ್ಟವರಿಗೆ ಈ ಹೆಸರುಗಳು ಬಂದಿರಬಹುದು.

ಹೀಗೆ ಜಂಗಮರಿಗೆ ಬೇರೆ ಬೇರೆ ಹೆಸರುಗಳು ಉಂಟಾಗಿರುತ್ತವೆ. ಈ ಹೆಸರುಗಳು ವೀರಶೈವ ವಾಙ್ಮಯದಲ್ಲಿಯೂ ಶಿಲಾಶಾಸನಗಳಲ್ಲಿಯೂ ದೊರೆಯುತ್ತವೆ.

## ಶೈವ ಭೇದಗಳು ಮತ್ತು ಜಂಗಮರು

ಜಂಗಮರೆಲ್ಲರೂ ಎಲ್ಲಕಡೆಗೂ ಶಿವೋಪಾಸಕರು ಮತ್ತು ಶಿವಚಿನ್ಹಗಳನ್ನು ಧರಿಸಿದವರು ಆಗಿದ್ದರು. ಶೈವರಲ್ಲಿ ಅನೇಕ ಪಂಗಡಗಳಿದ್ದುದು

ಆಗಮ ಗ್ರಂಥಗಳಿಂದ ತಿಳಿದು ಬರುತ್ತದೆ. ಐತಿಹಾಸಿಕದ ಕಾಲದಲ್ಲಿ ಪಾಶುಪತರು, ಕಾಳಾಮುಖರು, ವೀರಶೈವರು, ಕಾಪಾಲಿಕರು, ಶಿವಸಿದ್ಧಾಂತಿಗಳು, ತಾಂತ್ರಿಕರು, ಕಾಶ್ಮೀರೀ ಶೈವರು (ತ್ರಿಕರು), ವೀರಬಣಂಜುಗಳು ಎಂಬ ಅನೇಕ ಭೇದಗಳಿದ್ದುದು ಕಂಡುಬರುತ್ತದೆ. ಈ ಮತಸ್ಥರಿಗೆಲ್ಲ ಸ್ವತಂತ್ರ ಧರ್ಮಗ್ರಂಥಗಳೂ ಕೂಡ ಇರುತ್ತವೆ. ಇವರ ಧಾರ್ಮಿಕ ವರ್ಗದವರಿಗೂ ಕೂಡ ಗಣಂಗಳು, ಜಂಗಮರು ಎಂಬ ಹೆಸರುಗಳಿವೆ.

ಹಿಂದುಸ್ತಾನದಲ್ಲಿ ಶಿವಮತವನ್ನು ಪಾಲಿಸುವವರ ಸಂಖ್ಯೆಯು ಬಹು ದೊಡ್ಡದಾಗಿದೆ. ವಿಷ್ಣುಭಕ್ತರಿಗಿಂತಲೂ ಶಿವಭಕ್ತರ ಸಂಖ್ಯೆಯು ಅನೇಕ ಮಡಿ ಹೆಚ್ಚಿಗೆ ಇದ್ದುದು ಕಂಡು ಬಂದಿದೆ.

ಹಿಂದಿನಕಾಲದಲ್ಲಿ ಅನೇಕ ರಾಜರೂ ಕೂಡ ಶಿವಮತವನ್ನು ಅಂಗೀಕರಿಸಿದ್ದಾರೆ. ದಕ್ಷಿಣ ದೇಶದಲ್ಲಿ ಚೋಳರಾಜರು, ಪಾಂಡ್ಯ ಕೇರಳ ರಾಜರು, ಚಾಲುಕ್ಯ ರಾಜರಲ್ಲಿ ಬಹುಜನರು, ಉತ್ತರದೇಶದಲ್ಲಿ ಕಾಶೀ ರಾಜರು, ಕಾಶ್ಮೀರ ರಾಜರು ಶೈವ ಮತಾವಲಂಬಿಗಳಾಗಿದ್ದರು.

## ಜಂಗಮರು ದೇಶ ಪರ್ಯಟನ ಮಾಡುವರು

ನಾವು ಪ್ರಸಿದ್ಧಿಸಿದ ಚರಿತ್ರೆಗಳಿಂದ ಬಹು ಜನ ಜಂಗಮರು ಯಾವಾಗಲೂ ಸಂಚಾರದಲ್ಲಿ ಇರುತ್ತಿದ್ದ ಹಾಗೆ ಕಂಡುಬರುತ್ತದೆ. ಅವರು ಸಂಚರಿಸುತ್ತಲಿರುವಾಗ ಬೋಧೆಮಾಡುವದೇ ಅವರ ಮುಖ್ಯ ಕಾರ್ಯವಾಗಿತ್ತು. ಕೆಲವು ವಚನಕಾರರು ಜಂಗಮರನ್ನು ತಮ್ಮ ವಚನಗಳಲ್ಲಿ ದೇಶಾಂತರಿಗಳೆಂತಲೂ, ಪರದೇಶಯ್ಯಗಳೆಂತಲೂ, ದೇಶಿಕರೆಂತಲೂ ಕರೆದಿದ್ದಾರೆ. ಜಂಗಮರು ದೇಶಗಳಲ್ಲಿ ತಿರುಗಾಡುತ್ತಿದ್ದುದರಿಂದ ಅವರಿಗೆ ಈ ಬಗೆಯ ಹೆಸರುಗಳು ಬಂದಿರಬಹುದು.

ಪುರಾತನ ಕಾಲದಲ್ಲಿ ಜಂಗಮರಲ್ಲಿ ಎಲ್ಲರಿಗೂ ಮಠಗಳಿದ್ದವೆಂದು ಹೇಳಲು ಬರಲಾರದು. ಆದರೆ ಅವರಲ್ಲಿ ಕೆಲವರು ಸ್ಥಾಯಿಕವಾಗಿ ಕೆಲವೊಂದು ಸ್ಥಳದಲ್ಲಿ ಉಳಿದು ತಮ್ಮಗೋಸ್ಕರ ಮಠಗಳನ್ನು

ಕಟ್ಟಿಸಿಕೊಂಡು ಅಲ್ಲಿ ಇದ್ದುದು ಕಂಡುಬರುತ್ತದೆ. ಉರಿಲಿಂಗಪೆದ್ದಿಯ ಗುರುವಾದ ಉರಿಲಿಂಗನು ಕಂಧಾರವೆಂಬ ಗ್ರಾಮದಲ್ಲಿ ಒಂದು ಮಠವನ್ನು ಕಟ್ಟಿಸಿಕೊಂಡು ವಾಸಮಾಡುತ್ತಿದ್ದನು. ಅವನು ಗುರುವೆನಿಸಿಕೊಂಡು ಭಕ್ತರಿಗೆ ದೀಕ್ಷಾದಿ ಕಾರ್ಯಗಳನ್ನು ಮಾಡುತ್ತಿದ್ದನೆಂದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ. ಅದರಂತೆಯೇ ನಿರ್ಲಜ್ಜ ಶಾಂತಯ್ಯನೂ, ಸಕಳೇಶ ಮಾದರಸನೂ ಮಠಾಧಿಪತಿಗಳಾಗಿದ್ದರು. ಇವರೆಲ್ಲರು ಬಸವೇಶ್ವರನ ಕಿಂತಲೂ ಸ್ವಲ್ಪ ಹಿಂದಿನವರು. ಆದರೆ ಅಸಂಖ್ಯ ಜಂಗಮರು ಹೀಗೆ ಒಂದೆಡೆಗೆ ಇರದೆ ಒಂದುಸ್ಥಾನದಲ್ಲೆಲ್ಲ ಪ್ರವಾಸಮಾಡುತ್ತ ಮುಖ್ಯ ಮುಖ್ಯ ಶಿವಕ್ಷೇತ್ರಗಳಿದ್ದಲ್ಲಿಗೆ ಹೋಗಿ ತೀರ್ಥಾಟನ ಮಾಡುವದರ ಕಡೆಗೆ ಹೆಚ್ಚಾಗಿ ಲಕ್ಷಕೊಡುತ್ತಿದ್ದಹಾಗೆ ಕಂಡುಬರುತ್ತದೆ. ಇದು ಕೆಳಗೆ ಕಾಣಿಸಿದ ಉದಾಹರಣೆಗಳಿಂದ ತಿಳಿದುಬರುವದು.

ಶಿರಿಯಾಳ ಚೆಂಗಳೆಯರ ಚರಿತ್ರೆಯು ವೀರಶೈವರಲ್ಲಿ ಪ್ರಸಿದ್ಧವಾಗಿದೆ. ಈ ಉಭಯತರ ಉಲ್ಲೇಖಗಳು ವಚನ ಗ್ರಂಥಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಈ ಉಭಯತರನ್ನು ಕಂಡು ಅವರಿಂದ ದಾನ ಬೇಡಿದವನು ಜಂಗಮನು. ಶಿರಿಯಾಳ ಚೆಂಗಳೆಯರಿದ್ದ ಪಟ್ಟಣವು ಕಾಂಚೀನಗರವು. ಅಮ್ಮವ್ವೆ ಅಥವಾ ಬಿಜ್ಜ ಮಹಾದೇವಿಯನ್ನು ಕಂಡು ಅವಳಿಗೆ ಪರಮಾತ್ಮನ ಸ್ವರೂಪವನ್ನು ಹೇಳಿಕೊಟ್ಟವನು ಒಬ್ಬ ಜಂಗಮನಾಗಿರುವನು. ಅಮ್ಮವ್ವೆಯ ಗ್ರಾಮವು ಮೈಸೂರು ಪ್ರಾಂತದಲ್ಲಿರುವ ಬಿಜ್ಜಾವರವು. ಬಳ್ಳಿಗಾವಿ ಬನವಾಸಿ ಪ್ರಾಂತದಲ್ಲಿ ಅನೇಕ ಶಿವಶರಣರು ಆಗಿಹೋಗಿದ್ದು ಇಲ್ಲಿಗೆ ಜಂಗಮರು ಯಾವಾಗಲೂ ಬರುತ್ತಿದ್ದರು. ಬನವಾಸಿಯು ಪ್ರಸಿದ್ಧ ಶೈವ ಕ್ಷೇತ್ರವಾಗಿದೆ. ಆದಯ್ಯನು ಪುಲಿಗೆರೆ ಅಂದರೆ ಈಗಿನ ಲಕ್ಷ್ಮೇಶ್ವರದಲ್ಲಿದ್ದಾಗ್ಗೆ ಅನೇಕ ಜಂಗಮರು ಪಟ್ಟಣದ ಹೊರಗಿನ ಉದ್ಯಾನದಲ್ಲಿ ಬಂದಿಳಿದಿದ್ದರು. ಅವರನ್ನು ಕಂಡು ಆದಯ್ಯನು ಅವರನ್ನು ಉಪಚರಿಸುವದಕ್ಕೋಸ್ಕರ ತನ್ನ ಮನೆಗೆ ಬರಮಾಡಿಕೊಂಡನು. ಇವರು ಸಂಚಾರದಲ್ಲಿದ್ದ ಜಂಗಮರೆಂದು ಆದಯ್ಯನ ಚರಿತ್ರೆಯಲ್ಲಿ ಹೇಳಿದೆ. ದೇವರ ದಾಸಿಮಯ್ಯನು ಮುದನೂರಲ್ಲಿ ತನ್ನ ನೆಯ್ಗೆಯ ಕಾಯಕವನ್ನು ಮಾಡುವಾಗ್ಗೆ ತಾನು ನೆಯ್ದ ಸುಂದರವಾದ ಬಟ್ಟೆಯನ್ನು ಬೇಡಿ ಅದನ್ನು ಹರಿದುಹಾಕಿದವನು ಒಬ್ಬ ಜಂಗಮನಾಗಿದ್ದಾನೆ. ಈ ಜಂಗಮನಿಗೋಸ್ಕರ ದಾಸಿಮಯ್ಯನೂ ಅವನ ಹೆಂಡತಿಯೂ ಬಹಳ ಭಕ್ತಿಯನ್ನು ವಹಿಸಿದವರು. ಬಸ

ವೇಶ್ವರನು ಕಲ್ಯಾಣ ಪಟ್ಟಣದಲ್ಲಿದ್ದಾಗ್ಗೆ ಅವನ ಖ್ಯಾತಿಯು ಎಲ್ಲ ಕಡೆಗೂ ಪಸರಿಸಲು ಅನೇಕ ದೇಶಗಳಲ್ಲಿ ಸಂಚಾರಮಾಡುತ್ತಿದ್ದ ಜಂಗಮರು ಅವನಿದ್ದಲ್ಲಿಗೆ ಬರುವವರಾದರು. ಉದ್ಭಟ ಅಥವಾ ಕುಮಾರಪಾಲ ಘೂರ್ಜರನು ಗುಜರಾಥ ದೇಶವನ್ನು ಆಳಿದ್ದಾನೆ. ಜಂಗಮರು ಅವನಲ್ಲಿದ್ದುದು ಅವನ ಚರಿತ್ರೆಯಲ್ಲಿ ಹೇಳಿದೆ. ಸಿಂಧುದೇಶದ ಸಿಂಧುಮರಾಳನ ಚರಿತ್ರೆಯಲ್ಲಿ ಒಬ್ಬ ಜಂಗಮನು ಅವನನ್ನು ಕಂಡು ಅವನ ಅರ್ಧ ಶರೀರವನ್ನು ಬೇಡಿದ್ದರ ಉಲ್ಲೇಖವಿದೆ. ಬಹು ಜನ ಜಂಗಮರು ಕಾಶೀ ಪಟ್ಟಣಕ್ಕೆ ಆಗಿಂದಾಗ್ಗೆ ಬರುವರು. ಅವರ ಉಲ್ಲೇಖಗಳು ಶಿವಶರಣರ ಚರಿತ್ರೆಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಕಾಶೀ ವಿಶ್ವೇಶ್ವರ ದೇವಾಲಯವು ಶೈವ ಧರ್ಮೀಯರಿಗೆಲ್ಲ ಪೂಜ್ಯ ಸ್ಥಾನವಾಗಿರುತ್ತದೆ. ಹಲಾಯುಧನೆಂಬ ಶಿವಶರಣನು ಬರ್ಬರದೇಶ ಅಂದರೆ ಈಗಿನ ಅಫಗಾಣಿಸ್ತಾನದಲ್ಲಿಯವನು. ಜಂಗಮರು ಅವನನ್ನು ಕಂಡಾಗ್ಗೆ ಅವನು ಅವರೊಡನೆ ವಾದಿಸಿದ್ದಾನೆ. ಅಫಗಾಣಿಸ್ಥಾನಕ್ಕೆ ಸಮೀಪವಾಗಿರುವ ಕಾಶ್ಮೀರ ದೇಶವು ಒಂದುಕಾಲದಲ್ಲಿ ಶೈವ ಧರ್ಮೀಯರ ಮುಖ್ಯ ಸ್ಥಾನವಾಗಿತ್ತು. ಅಲ್ಲಿ ಅಸಂಖ್ಯ ಜಂಗಮರು ವಾಸಮಾಡುತ್ತಿದ್ದರು. ಅವರ ಉಲ್ಲೇಖಗಳು ವೀರಶೈವ ಗ್ರಂಥಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಕಾಶ್ಮೀರಕ್ಕೆ ಸಮೀಪವಾಗಿ ಕೇದಾರನಾಥ ದೇವಾಲಯವಿರುತ್ತದೆ. ಈ ದೇವಾಲಯದ ಆಡಳಿತೆಯು ಪುರಾತನಕಾಲದಿಂದಲೂ ಜಂಗಮರಕಡೆಗೆಯೇ ಇದ್ದುದು ಗ್ರಂಥಗಳಿಂದ ತಿಳಿದುಬರುತ್ತದೆ. ಶ್ರೀಪತಿ ಪಂಡಿತನು ಆಂಧ್ರ ದೇಶದವನು. ಅವನ ಗ್ರಾಮವು ಬೆಜವಾಡವು. ಮಲ್ಲಿಕಾರ್ಜುನ ಪಂಡಿತಾರಾಧ್ಯನು ಆಂಧ್ರ ದೇಶದಲ್ಲಿಯ ದ್ರಾಕ್ಷಾರಾಮ ಕ್ಷೇತ್ರದವನು. ಇವರಬ್ಬರ ಮೂಲಕ ಆಂಧ್ರ ದೇಶದಲ್ಲಿ ವೀರಶೈವ ಧರ್ಮದ ಪ್ರಸಾರವು ಕೆಲವು ಕಾಲ ಬಹು ಒತ್ತರದಿಂದ ನಡೆಯಿತು. ಆಗ ವೇಮನಾರಾಧ್ಯ, ಪಾಲ್ಕುರಿಕೆ ಸೋಮಾರಾಧ್ಯರು ಇಲ್ಲಿ ಉದಯವಾದರು. ಇವರ ಕಾಲದಲ್ಲಿ ಇತರ ಧರ್ಮೀಯರ ಕೂಡ ಯುದ್ಧಗಳುಂಟಾದವು. ಅವುಗಳಲ್ಲಿ ಜಂಗಮರು ಮುಖ್ಯ ಭಾಗವನ್ನು ವಹಿಸಿದವರಾಗಿದ್ದರು. ಹೀಗೆ ಜಂಗಮರು ಅನೇಕ ದೇಶಗಳಲ್ಲಿ ಸಂಚರಿಸುತ್ತ ಧರ್ಮಬೋಧೆ ಮಾಡುತ್ತಿದ್ದುದು ಕಂಡುಬರುತ್ತದೆ.

ಆದರೆ ಜಂಗಮರ ಸಂಚಾರಗಳು ಓಡಿಸಾ, ಬಂಗಾಲ, ಬಿಹಾರಗಳಲ್ಲಿ ಹೆಚ್ಚಾಗಿ ಇದ್ದುದು ಶಿವಶರಣರ ಚರಿತ್ರೆಗಳಿಂದ ಕಂಡುಬರುವದಿಲ್ಲ.

ನನ್ನಯ್ಯ ಮತ್ತು ಸುಜ್ಞಾನಿ ದೇವರು ಮಾತ್ರ ಓಡಿಸಾ ಪ್ರಾಂತದವರೆಂದು ಹೇಳಲ್ಪಟ್ಟಿದೆ. ಸುಜ್ಞಾನಿದೇವನು ಮಠಾಧಿಕಾರಿಯಾಗಿ ಲಿಂಗದೀಕ್ಷೆಯನ್ನು ಕೊಡುವ ಕಾರ್ಯ ಮಾಡುತ್ತಿದ್ದನೆಂದು ಅವನ ಚರಿತ್ರೆಯಿಂದ ತಿಳಿದು ಬರುತ್ತದೆ. ಆದರೆ ಈ ದೇಶದಲ್ಲಿ ಜಂಗಮರಿದ್ದುದರ ಉದಾಹರಣೆಗಳು ಹೆಚ್ಚಿಗೆ ದೊರೆಯುವದಿಲ್ಲ. ಬಂಗಾಲ ಬಿಹಾರಗಳಲ್ಲಿ ಜಂಗಮರು ಸಂಚರಿಸುತ್ತಿದ್ದುದು ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುವದಿಲ್ಲ.

ಮಹಾರಾಷ್ಟ್ರದಲ್ಲಿ ಹರಿಯುವ ಗೋದಾವರೀ ತೀರ ಪ್ರದೇಶಗಳಲ್ಲಿ ಜಂಗಮರು ಸಂಚರಿಸುತ್ತಿದ್ದುದರ ಬಗ್ಗೆ ಉಲ್ಲೇಖಗಳು ಕೆಲವು ಕಡೆಗೆ ದೊರೆಯುತ್ತವೆ. ಪರಂವಳಿಗೆ ಅಥವಾ ಈಗಿನ ಪರಳಿ ಇಲ್ಲಿ ವೈಜವ್ವೆಯು ವಾಸವಾಗಿದ್ದಳು. ಅವಳು ಜಂಗಮರನ್ನು ಆದರಿಸಿದ್ದಕ್ಕೋಸ್ಕರ ತನ್ನ ಗಂಡನಿಂದ ಹಿಂಸೆಯನ್ನು ಹೊಂದಿದಳು. ವೈಜನಾಥ ದೇವಾಲಯವು ಇಲ್ಲಿ ಅವಳ ಹೆಸರಿನಿಂದ ಉಗಮಿಸಿದೆ. ಇದು ಗೋದಾವರೀ ತೀರ ಪ್ರದೇಶವಾಗಿದೆ. ಈ ಭಾಗದಲ್ಲಿ ಕೋಲಂಬೆ, ಉರಿಲಿಂಗ, ಉರಿಲಿಂಗಪೆದ್ದಿ, ಕುಂಬಾರ ಗುಂಡಯ್ಯ ಇವರು ಪ್ರಸಿದ್ಧರಾಗಿದ್ದಾರೆ.

## ಜಂಗಮರ ಸಂಚಾರದ ಮಾರ್ಗಗಳು.*

ಒಟ್ಟಿಗೆ ಪುರಾತನ ಕಾಲದಲ್ಲಿ ಜಂಗಮರು ದೇಶದಲ್ಲಿ ಯಾವಾಗಲೂ ಪ್ರವಾಸ ಮಾಡುತ್ತಿದ್ದುದು ಮೇಲಿನ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ. ಅವರ ಸಂಚಾರದ ದಾರಿಗಳು ಕೆಳಗಿನಂತೆ ಇದ್ದುದಾಗಿ ತೋರುತ್ತದೆ. ಉತ್ತರ ಪ್ರಾಂತವಾದ ಕಾಶ್ಮೀರದಿಂದ ದಕ್ಷಿಣಕ್ಕೆ ಕಾಂಚೀಪಟ್ಟಣದ ವರೆಗೂ ಅವರು ಪ್ರವಾಸಮಾಡುತ್ತಿದ್ದರು.

ಕಾಶ್ಮೀರದಲ್ಲಿ ಸಪಾದ ಲಕ್ಷ ಅಂದರೆ ಸವ್ವಾಲಕ್ಷ ದೇಶದಲ್ಲಿ ಶಿವ ಧರ್ಮೀಯ ರಾಜರು ಆಳುತ್ತಿದ್ದರು. ಇವರಲ್ಲಿ ಜಂಗಮರ ಬಹು ದೊಡ್ಡ ಗುಂಪು ವಾಸಮಾಡುತ್ತಿದ್ದಿತು. ಇವರು ಈ ಭಾಗದಿಂದ ಪಶ್ಚಿಮಕ್ಕೆ ಅಫಗಾಣಿಸ್ತಾನದಲ್ಲಿರುವ ಕಂದಹಾರದ ವರೆಗೆ ಮತ್ತು ಪೂರ್ವಕ್ಕೆ ಕೇದಾರದ ವರೆಗೆ ಹೋಗುವರು. ಮುಂದೆ ಕಾಶ್ಮೀರದಿಂದ ಕಾಶೀಕ್ಷೇತ್ರದ ವರೆಗೂ ಹೋಗಿ ಅಲ್ಲಿ ನಿಲ್ಲುವರು. ಮುಂದೆ ಅವರು ದಕ್ಷಿಣಕ್ಕೆ ಮಾಳವಾ ದೇಶದಲ್ಲಿರುವ ಉಜ್ಜಯಿನಿಯ ವರೆಗೂ ಮಾರ್ಗಕ್ರಮಣ ಮಾಡುವರು.

ಉಜ್ಜಯಿನಿಯು ಶೈವರ ಪ್ರಸಿದ್ಧ ಕ್ಷೇತ್ರವಾಗಿದೆ. ಇಲ್ಲಿಂದ ಜಂಗಮರ ಕೆಲವು ತಂಡಗಳು ಪಶ್ಚಿಮಕ್ಕೆ ಗುಜರಾಥದೇಶವನ್ನು ಪ್ರವೇಶಿಸಿ. ಸೌರಾಷ್ಟ್ರ ಸೋಮನಾಥನ ಸ್ಥಾನದ ವರೆಗೂ ತೆರಳುತ್ತಿದ್ದವು. ಆದರೆ ಅವರ ಮುಖ್ಯ ತಂಡಗಳು ಉಜ್ಜಯಿನಿಯಿಂದ ಮುಂದೆ ಸಾಗಿ ಉದ್ಭಟದೇವನ ಚರಿತ್ರ ಯಲ್ಲಿ ಹೇಳಿದಂತೆ ರೇವಾನದಿ ಅಂದರೆ ಈಗಿನ ನರ್ಮದಾ ನದಿಯನ್ನು ದಾಟಿ 'ವರಹಾಟಕ' ಅಂದರೆ ಈಗಿನ ವರ್ಹಾಡವನ್ನು ಪ್ರವೇಶಿಸಿ ಗೋದಾವರೀ ನದಿಯನ್ನು ಪೈಠಣದ ಹತ್ತರ ದಾಟಿ ಕರ್ನಾಟಕವನ್ನು ಪ್ರವೇಶಿಸಿ ಕಲ್ಯಾಣಕ್ಕೆ ಬರುವವು. ಪೈಠಣದಿಂದ ಕೆಲವು ತಂಡುಗಳು, ಪಶ್ಚಿಮಕ್ಕೆ ಮಹಾರಾಷ್ಟ್ರವನ್ನು ಪ್ರವೇಶಿಸಿ ಕೊಲ್ಹಾಪುರದ ವರೆಗೂ ಹೋಗುತ್ತಿರ ಬಹುದು.

ಆದರೆ ಕಲ್ಯಾಣಕ್ಕೆ ಬಂದ ತಂಡಗಳು ಕರ್ನಾಟಕದಲ್ಲಿ ಜಂಗಮರ ಸ್ಥಾನಗಳು ಬಹು ವಿಪುಲವಾಗಿದ್ದದರಿಂದ ಅಲ್ಲಿಗೆ ಅವು ಹೋಗುತ್ತೀರಬಹುದು. ಈ ಸ್ಥಾನಗಳಲ್ಲಿ ಪೊನ್ನಲಿಗೆ, ಮಂಗಳವಾಡ, ಮುದನೂರು, ಕಪ್ಪಡಿಸಂಗಮ, ಪಟ್ಟದಕಲ್ಲು, ಪುಲಿಗೆರೆ, ಬನವಾಸಿ, ಬಳ್ಳಿಗಾವಿ, ಸಿದ್ಧಗಂಗಾ ಪ್ರದೇಶ ಇವು ಮುಖ್ಯವಾದವುಗಳು. ಇಲ್ಲಿ ಜಂಗಮರ ದೊಡ್ಡ ದೊಡ್ಡ ವಸಾಹತ್ತುಗಳು ಇದ್ದ ಹಾಗೆ ತೋರುತ್ತದೆ

ಈ ಭಾಗಗಳಿಂದ ಜಂಗಮರ ತಂಡಗಳು ಪೂರ್ವಕ್ಕೆ ಪಂಚಾಕ್ಷೇತ್ರ ಶ್ರೀ ಶೈಲ, ಅಲ್ಲಿಂದ ಮುಂದೆ ಅಮರಗುಂಡ ಮತ್ತು ದಾಕ್ಷಾರಾಮ ಕ್ಷೇತ್ರ ಈ ಪಟ್ಟಣಗಳ ವರೆಗೂ ತೆರಳುತ್ತಿರಬಹುದು. ಯಾಕಂದರೆ ಇಲ್ಲಿ ಜಂಗಮರಿದ್ದ ಉಲ್ಲೇಖಗಳು ಆಗಿಂದಾಗ್ಗೆ ಗ್ರಂಥಗಳಲ್ಲಿ ಬರುತ್ತವೆ.

ಕಲ್ಯಾಣಪಟ್ಟಣಕ್ಕೆ ಬಂದ ತಂಡಗಳು ಮುಂದೆ ಸಾಗಿ ಮುಂದೆ ದಕ್ಷಿಣಕ್ಕೆ ಪಾಲ್ಕುರಿಕೆಯ ಭಾಗ ಅಂದರೆ ಈಗಿನ ಮೈಸೂರ ಸಂಸ್ಥಾನದ ಪೂರ್ವಭಾಗದೊಳಗಿಂದ ಹಾಯ್ದು ಕಪಿಲಾ ಕಾವೇರೀ ಸಂಗಮದ ವರೆಗೂ ಹೋಗುವವು. ಈ ಭಾಗಗಳಲ್ಲೆಲ್ಲ ಶಿವಶರಣರ ಸ್ಥಾನಗಳು ಅಸಂಖ್ಯಾತವಾಗಿವೆ. ಅವು ತುಮಕೂರ, ಅನಂತಪುರ ಜಿಲ್ಲೆಗಳಲ್ಲಿ ಹೆಚ್ಚಾಗಿ ಇವೆ.

ಇಲ್ಲಿಂದ ಜಂಗಮರು ಕಾಂಚೀಪುರದ ವರೆಗೆ ಹೋಗಿ ಅದು ಶೈವ ಧರ್ಮಕ್ಕೆ ಮುಖ್ಯ ಸ್ಥಾನವಾಗಿದ್ದುದರಿಂದ ಅಲ್ಲಿ ಅವರು ಹೆಚ್ಚಿಗೆ ಕಾಲ ಕಳೆಯುವರು. ಅಲ್ಲಿಂದ ಅವರು ಪಶ್ಚಿಮಕ್ಕೆ ಕೇರಳದೇಶ ಅಂದರೆ ಮಲಯಾಳ ದೇಶವನ್ನು ಪ್ರವೇಶಿಸುವರು. ಇಲ್ಲವೆ ಅವರು ಮುಂದೆ ರಾಮೇಶ್ವರದ ವರೆಗೂ ಹೋಗುವರು. ಈ ದೇಶಗಳಲ್ಲೆಲ್ಲ ಪುರಾತನ ಪ್ರಸಿದ್ಧ ಶಿವಕ್ಷೇತ್ರಗಳಿರುತ್ತವೆ. ಈ ಪ್ರಕಾರ ಹಿಂದಿನ ಕಾಲದಲ್ಲಿ ಜಂಗಮರು ಕಾಶ್ಮೀರದಿಂದ ರಾಮೇಶ್ವರದ ವರೆಗೂ ತಮ್ಮ ಹೆಸರಿಗೆ ತಕ್ಕಂತೆ ಪ್ರವಾಸ ಮಾಡುತ್ತ ಜನತೆಯಲ್ಲಿ ಶಿವಧರ್ಮವನ್ನು ಪ್ರಸಾರಮಾಡುತ್ತ ನಾಡಿನಲ್ಲಿ ಧರ್ಮ ಜಾಗ್ರತಿಯನ್ನು ಮಾಡುತ್ತಿದ್ದರೆಂದು ತೋರುತ್ತದೆ. ನಾವು ವಿವರಿಸಿದ ಸಂಚಾರ ಮಾರ್ಗಗಳು ಕೆಳಗೆ ಕಾಣಿಸಿದ ಶಿವಶರಣರ ಚರಿತ್ರೆಗಳಿಂದಲೂ ಸ್ಪಷ್ಟಪಡುತ್ತವೆ.

ಉದ್ಭಟ ಕಾವ್ಯವನ್ನು ಸೋಮರಾಜ ಕವಿಯು ೧೨೨೨ ರಲ್ಲಿ ಬರೆದಿದ್ದಾನೆ. ಅದರಿಂದ ತಿಳಿಯುವದೇನೆಂದರೆ— ಉದ್ಭಟ ರಾಜನು ಗುಜರಾಥ ದೇಶವನ್ನು ಆಳುತ್ತಿರುವಾಗ್ಗೆ ಪಂಪಾಕ್ಷೇತ್ರದಲ್ಲಿ ವಾಸಿಸುತ್ತಿದ್ದ ದೇವಲ ಮಹರ್ಷಿಯನ್ನು ವಿರೋಧಿಗಳು ಪೀಡಿಸುತ್ತಿರುವದನ್ನು ಕೇಳಿ ಅವನನ್ನು ಸಂರಕ್ಷಿಸಬೇಕೆಂದು ತನ್ನ ದಂಡಿನೊಡನೆ ಪಂಪಾಕ್ಷೇತ್ರಕ್ಕೆ ಹೊರಟನು. ಹಾದಿಯಲ್ಲಿ ಅವನಿಗೆ ರೇವಾನದಿ ಅಂದರೆ ನರ್ಮದಾ ನದಿಯು ಹತ್ತಿತು. ಅದನ್ನು ದಾಟಿ ಮುಂದೆ ವಿಂಧ್ಯ ಪರ್ವತದೊಳಗಿಂದ ಹಾಯ್ದು ಗೋದಾವರೀ ನದಿಯನ್ನು ದಾಟಿ ಪಂಪಾಕ್ಷೇತ್ರಕ್ಕೆ ಬಂದನು. ಇದರಿಂದ ಅವನು ಯಾವ ಮಾರ್ಗದಿಂದ ಬಂದನೆಂಬುದು ತಿಳಿಯುತ್ತದೆ.

ಸೋಮಾಸಿಮಾರನೆಂಬ ಮತ್ತೊಬ್ಬ ಶಿವಶರಣನು ಕಾಶ್ಮೀರ ದೇಶದವನಾಗಿದ್ದು ಅವನು ಅಲ್ಲಿಂದ ಹೊರಟು ಮೊದಲು ಸ್ಥಾನಪುರ ಅಂದರೆ ಸ್ಥಾನೇಶ್ವರಕ್ಕೆ ಬಂದು ಅಲ್ಲಿಂದ ಕಾಶೀಕ್ಷೇತ್ರಕ್ಕೆ ಬರುವನು. ಅಲ್ಲಿಂದ ದಕ್ಷಿಣಕ್ಕೆ ತೆರಳಿ ಶ್ರೀಶೈಲ ಕ್ಷೇತ್ರವನ್ನು ಸಂದರ್ಶಿಸಿ ಪಂಪಾಕ್ಷೇತ್ರಕ್ಕೆ ಬರುತ್ತಾನೆ. ಅಲ್ಲಿಂದ ಅವನು ದಕ್ಷಿಣದೇಶಕ್ಕೆ ಹೊರಟು ಪೊನ್ನಾಂಬಲಕ್ಕೆ ಬಂದು ಅಲ್ಲಿ ತನ್ನ ನಿವಾಸವನ್ನು ಮಾಡುತ್ತಾನೆ.

ಶಂಕರ ದಾಸಿಮಯ್ಯನು ಈಗ ಇಳಕಲ್ಲಿನ ಹತ್ತಿರವಿರುವ ಕಂದಗಲ್ಲಿ (ಕಂದಶಿಲೆ) ನಲ್ಲಿ ವಾಸಿಸುತ್ತಿದ್ದು ಅವನು ಮೊದಲು ನವಿಲೆ, ಅಲ್ಲಿಂದ ಉತ್ತರಕ್ಕೆ ಮುದನೂರು, ಅಲ್ಲಿಂದ ಕಲ್ಯಾಣಕ್ಕೆ ಬರುತ್ತಾನೆ. ಅಲ್ಲಿ ಜಯಸಿಂಹ ರಾಜನ ಮುಂದೆ ತನ್ನ ಪೂವಾಡವನ್ನು ಮಾಡಿ ಉತ್ತರಕ್ಕೆ ತೆರಳಿ ಉಜ್ಜಯಿನಿಗೆ ಬಂದು ಅಲ್ಲಿದ್ದ ಸಿದ್ಧರನ್ನು ಜಯಿಸುತ್ತಾನೆ. ಆಮೇಲೆ ಅವನು ದಕ್ಷಿಣಕ್ಕೆ ಮಹಾರಾಷ್ಟ್ರ ದೇಶದೊಳಗಿಂದ ಹಾಯ್ದು ಈಗ ಸಾತಾರಾ ಜಿಲ್ಲೆಯಲ್ಲಿರುವ ಪೆಂಬೇರಕ್ಕೆ ಬಂದು ಅಲ್ಲಿಂದ ಅವನು ಕೊಲ್ಹಾಪುರಕ್ಕೆ ಹೋಗಿ ಅಲ್ಲಿಯ ಸಿದ್ಧರನ್ನು ಜಯಿಸಿ ನವಿಲೆ ಗ್ರಾಮಕ್ಕೆ ಬರುತ್ತಾನೆ.

ವರದಾನಿ ಗುಡ್ಡವ್ವೆಯು ವಿಜಾಪುರ ಪಟ್ಟಣದ ಪಶ್ಚಿಮಕ್ಕೆ ೩೫ ಮೈಲುಗಳ ಮೇಲೆ ಇರುವ ಗುಡ್ಡಾಪುರದವಳು. ಅವಳು ಮೊದಲು ಕಲ್ಯಾಣಕ್ಕೆ ಬಂದು ಅಲ್ಲಿಂದ ಆದವಾನಿ, ಅಲ್ಲಿಂದ ಅಲಂಪುರ (ರಾಯಚೂರ ಜಿಲ್ಲೆ) ದಲ್ಲಿ ವೈರಿಗಳನ್ನು ಸೋಲಿಸಿ, ಅಲ್ಲಿಂದ ದಕ್ಷಿಣಕ್ಕೆ ತೆರಳಿ ಕಪಿಲಾ ಕಾವೇರೀ ಸಂಗಮಸ್ಥಾನಕ್ಕೆ ಬರುತ್ತಾಳೆ. ಅಲ್ಲಿ ಅವಳು ಕೆಲವು ಕಾಲ ಕಳೆದು ರಾಮೇಶ್ವರಕ್ಕೆ ಹೋಗಿ ಅಲ್ಲಿಂದ ಹಿಂದಿರುಗಿ ಕಂಚೀಪಟ್ಟಣಕ್ಕೆ ಬರುತ್ತಾಳೆ. ಆಮೇಲೆ ಅವಳು ಕಾಶೀ ಪಟ್ಟಣಕ್ಕೆ ಹೋಗಿ ಅಲ್ಲಿಂದ ಸೊಲ್ಲಾಪುರ, ಆಮೇಲೆ ಕಪ್ಪಡಿಸಂಗಮ, ಆಮೇಲೆ ಬಸವೇಶ್ವರನು ಜನಿಸಿದ ಬಾಗೇವಾಡಿ, ಆಮೇಲೆ ಮನಗೂಳಿ ಈ ಸ್ಥಳಗಳಿಗೆ ಹೋಗಿ ಪುನಃ ಸ್ವಗ್ರಾಮಕ್ಕೆ ಬರುತ್ತಾಳೆ.

ಏಕಾಂತದ ರಾಮಯ್ಯನು ಈಗ ಕಲಬುರ್ಗಿ ಜಿಲ್ಲೆಯಲ್ಲಿರುವ ಆಲಂದೆ (ಆಳಂದ) ಯವನು. ಅವನು ತೀರ್ಥಾಟನ ಮಾಡಬೇಕೆಂದು ಬಯಸಿ ಮೊದಲು ಕಲ್ಯಾಣಕ್ಕೆ ಬರುತ್ತಾನೆ. ಅಲ್ಲಿ ಪಟ್ಟಣಕ್ಕೆ ಸಮೀಪವಿದ್ದ ಶಿವಪುರವೆಂಬ ಅದರ ಶಾಖಾ ನಗರಕ್ಕೆ ಬಂದು ಅಲ್ಲಿಂದ ಪುಲಿಗೆರೆ (ಲಕ್ಷ್ಮೇಶ್ವರ) ಆಮೇಲೆ ಅಬ್ಬಲೂರಿಗೆ ಬರುತ್ತಾನೆ.

ರೇವಣಸಿದ್ಧನು ಮೊದಲು ಬಹಳ ದಿವಸ ಮಂಗಳವಾಡದಲ್ಲಿ ಇದ್ದು ಈ ಭಾಗದಲ್ಲಿ ಅವನು ವಾಸಿಸಿದ ಸ್ಥಳಗಳಾದ ಇಂಗಳೇಶ್ವರ, ಹೊರ್ತಿ (ಇಂಡಿತಾಲೂಕು) ರೇಣಾವಿ (ಸಾತಾರಾಜಿಲ್ಲಾ) ಈ ಗ್ರಾಮಗಳಲ್ಲಿ

ಈಗಲೂ ಅವನ ಹೆಸರಿನ ಕುರುಹುಗಳು ಇವೆ. ಆಮೇಲೆ ಅವನು ಬನವಾಸೀ ಪ್ರಾಂತಕ್ಕೆ ಬಂದು ಅಲ್ಲಿಂದ ದಕ್ಷಿಣಕ್ಕೆ ತೆರಳಿ ಬೆಂಗಳೂರು ಜಿಲ್ಲೆಯಲ್ಲಿರುವ ಕ್ಲೋಸಪೇಟಕ್ಕೆ ಬಂದು ಅಲ್ಲಿಂದ ಕಂಚಿಗೆ ಆಗಮಿಸಿ ಮುಂದೆ ಅವನು ಸಿಂಹಲ ದ್ವೀಪಕ್ಕೆ ಹೋಗಿ ತಿರುಗಿ ಮಂಗಳವಾಡಕ್ಕೆ ಬಂದು ಅಲ್ಲಿಂದ ಸೊನ್ನಲಿಗೆ ( ಸೊಲ್ಲಾಪುರ ), ಆಮೇಲೆ ತಾನು ಜನಿಸಿದ್ದ ಕೊಲ್ಲಿಪಾಕಿಗೆ ಬರುತ್ತಾನೆ.

ದೇವರ ದಾಸಿಮಯ್ಯನು ಮುದನೂರಿನವನು. ಅವನು ಮೊದಲು ಶ್ರೀಶೈಲಕ್ಕೆ ಬಂದು ಅಲ್ಲಿ ಉಪದೇಶವನ್ನು ಹೊಂದಿ, ಅಲ್ಲಿಂದ ಪೊಟ್ಟಲಕೆರೆ ಆಮೇಲೆ ಪುನಃ ತನ್ನ ಗ್ರಾಮವಾದ ಮುದನೂರಿಗೆ ತೆರಳಿ ಅಲ್ಲಿಯ ಸುತ್ತಲಿನ ಪ್ರದೇಶಗಳಲ್ಲಿ ತನ್ನ ಪವಾಡಗಳನ್ನು ನಡೆಸುತ್ತಾನೆ.

ಶಿವಲೆಂಕ ಮಂಚಣ್ಣನು ಕಾಶೀಪಟ್ಟಣದವನಾಗಿದ್ದು ಅಲ್ಲಿಂದ ಕಲ್ಯಾಣಕ್ಕೆ ಬರುತ್ತಾನೆ. ಮೋಳಿಗೆ ಮಾರಯ್ಯನು ಕಾಶ್ಮೀರ ದೇಶದವನಾಗಿದ್ದು ಅವನು ಮುಂದೆ ಕಲ್ಯಾಣಕ್ಕೆ ಬರುವವನಾದನು. ಸಕಳೇಶ ಮಾದರಸನು ಕಲ್ಲುಕುರಿಕೆಯ ರಾಜನಾಗಿದ್ದು, ಅವನು ಮೊದಲು ಶ್ರೀಶೈಲ, ಆಮೇಲೆ ಕಲ್ಯಾಣಕ್ಕೆ ಬರುವವನಾದನು.

ಪಂಡಿತಾರಾಧ್ಯನು ಆಂಧ್ರದೇಶದಲ್ಲಿರುವ ದ್ರಾಕ್ಷಾರಾಮದವನು. ಅವನು ಮೊದಲು ಆಂಧ್ರ ಮತ್ತು ತಮಿಳು ದೇಶಗಳಲ್ಲಿ ಸಂಚರಿಸುತ್ತ ಪೋರಾಂಡಲಕ್ಕೆ ಬರುತ್ತಾನೆ. ಇಲ್ಲಿಂದ ಪಾಲ್ಕುರಿಕೆಗೆ ಬಂದು ವೇಮಯ್ಯನನ್ನು ಕಂಡು, ಆಮೇಲೆ ಅನಂತಪುರ ಜಿಲ್ಲೆಯಲ್ಲಿರುವ ಕದಿರೆ ಗ್ರಾಮದಲ್ಲಿ ರೇಮಯ್ಯನ ಸ್ಥಾನವನ್ನು ಸಂದರ್ಶಿಸಿ, ಶ್ರೀಶೈಲ, ಆಮೇಲೆ ಸ್ವಗ್ರಾಮವಾದ ದ್ರಾಕ್ಷಾರಾಮಕ್ಕೆ ತಿರುಗಿ ಬರುತ್ತಾನೆ.

ಹೀಗೆ ಶಿವಶರಣರ ಸಂಚಾರಗಳಿದ್ದು ಇವೆಲ್ಲವುಗಳನ್ನು ನಾವು ಪರೀಕ್ಷಿಸಿದಲ್ಲಿ, ಹಿಂದಿನ ಕಾಲದಲ್ಲಿ ಕಾಶ್ಮೀರದೇಶದಿಂದ ಶಿವಶರಣರು ಮುಖ್ಯವಾಗಿ ಜಂಗಮರು ಕಾಶಿ, ಉಜ್ಜನಿ, ಕಲ್ಯಾಣ, ಬನವಸೆ, ಕಂಚೀ ಮಾರ್ಗವಾಗಿ ನಾಡುಗಳಲ್ಲಿ ಸಂಚರಿಸುತ್ತ ಅಲ್ಲಲ್ಲಿ ಶಿವಭಕ್ತರನ್ನು ಕಾಣುತ್ತ

ನಾವು ಹಿಂದೆ ಹೇಳಿದಂತೆ ಶಿವಕ್ಷೇತ್ರಗಳಿಗೆ ಆಗಿಂದಾಗ್ಗೆ ಸಂಚಾರಮಾಡುತ್ತಿದ್ದರೆಂದು ತಿಳಿದುಬರುತ್ತದೆ.

ಸಾಂಪ್ರತ ಕಾಲದಲ್ಲಿ ವೃತ್ತ ಪತ್ರಿಕೆಗಳು ಯಾವ ಕಾರ್ಯಗಳನ್ನು ಮಾಡುತ್ತವೆಯೋ ಅವೇ ಕಾರ್ಯಗಳನ್ನು ಜಂಗಮರು ಪುರಾತನಕಾಲದಲ್ಲಿ ಮಾಡುತ್ತಿದ್ದರೆಂದು ಹೇಳಬಹುದು. ವೃತ್ತಪತ್ರಿಕೆಗಳು ಹೇಗೆ ನಾಡಿನಲ್ಲಿ ನಡೆದ ವೃತ್ತಾಂತಗಳನ್ನು ತಿಳಿಸುತ್ತವೆಯೋ ಹಾಗೆಯೇ ಜಂಗಮರು ಹಿಂದಿನಕಾಲದಲ್ಲಿ ಒಂದು ದೇಶದಲ್ಲಿ ಶಿವಭಕ್ತರಿಗೆ ಉಂಟಾದ ಹಿತಾಹಿತದ ಸಂಗತಿಗಳನ್ನು ಇತರ ನಾಡಿನವರಿಗೂ ತಿಳಿಯಪಡಿಸುತ್ತಿದ್ದರು. ಇದರಿಂದ ಭರತಖಂಡದಲ್ಲಿರುವ ದೇಶಗಳಲ್ಲಿ ವಾಸಮಾಡುತ್ತಿದ್ದ ಶಿವಭಕ್ತರಲ್ಲಿ ಪರಸ್ಪರ ಸಂಬಂಧಗಳು ಬೆಳೆಯಲು ಸಂಚಾರದಲ್ಲಿರುತ್ತಿದ್ದ ಈ ಜಂಗಮರೇ ಕಾರಣರಾಗಿದ್ದರೆಂದು ತಿಳಿಯಲು ಪ್ರತ್ಯವಾಯವಿಲ್ಲ.

ಜಂಗಮರು ಶಿವಧರ್ಮವನ್ನು ತಿಳಿದವರಾಗಿ ಧರ್ಮಬೋಧೆಮಾಡುತ್ತಿದ್ದುದು ನಿಃಸಂಶಯವು. ಅವರು ಧರ್ಮಜ್ಞಾನವನ್ನು ಜನರಿಗೆ ಹೇಗೆ ಮಾಡಿಕೊಡುತ್ತಿದ್ದರೆಂಬುದನ್ನು ಶಿವಶರಣರ ಚರಿತ್ರೆಗಳಿಂದ ಊಹಿಸಬಹುದಾಗಿದೆ. ಅಲ್ಲಯ್ಯನೆಂಬ ಶಿವಶರಣನು ಮತ್ತು ನಿಂಬಾಣದ ಗಣೇಶ್ವರನು ಗಾಯನದ ಮೂಲಕವಾಗಿಯೂ ಇಂಡಿಯ ಶಾಂತಯ್ಯನು ಪಾಠ ಹೇಳುವದರ ಮೂಲಕವಾಗಿಯೂ ವೀರದೇವಯ್ಯನು ಉಕ್ತಿಗಳನ್ನು ಉಘ್ಘಟಿಸುವದರ ಮೂಲಕವಾಗಿಯೂ ಧರ್ಮಬೋಧೆ ಮಾಡುತ್ತಿದ್ದು ಇದೇ ಪದ್ಧತಿಯನ್ನು ಜಂಗಮರು ಪ್ರವಾಸಕಾಲದಲ್ಲಿ ಕೈಕೊಂಡಿರಬಹುದೆಂದು ತೋರುತ್ತದೆ. ಉಕ್ತಿಗಳನ್ನು ಹೇಳುವ ಜಂಗಮರನ್ನು 'ಸಾರುವ ಅಯ್ಯ'ಗಳೆಂದು ಕೆಲವು ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಕೆಲವು ಜಂಗಮರು ಸಿದ್ಧರಸವನ್ನು ಸಿದ್ಧಮಾಡುವಲ್ಲಿ ಪ್ರವೀಣರಾಗಿ ಅದರ ಮೂಲಕ ಅವರು ವಸ್ತುಗಳ ರೂಪಾಂತರ ಮಾಡುವರು (ಮೋರನ ವೇಮಯ್ಯನ ಚರಿತ್ರೆ ನೋಡಿರಿ). ಢಕ್ಕೆಯ ಮಾರಯ್ಯ, ಕಂಕರೀ ಕಕ್ಕಯ್ಯ ಈ ಶಿವಶರಣರಂತೆ ಕೆಲವೊಂದು ಕಾಯಕವನ್ನು ಅವರು ಕೈಕೊಂಡು ಬಾರಿಸುತ್ತ ಹಾಡುತ್ತ ಶಿವಶರಣರ ತತ್ವಗಳನ್ನು ಜನರಿಗೆ ತಿಳಿಸಿ ಹೇಳುವರು.

ಕೆಲವು ಜಂಗಮರು ಶಿವಜ್ಞಾನವನ್ನು ಚೆನ್ನಾಗಿ ಹೊಂದಿದವರಾಗಿ ತಮ್ಮ ಪ್ರವಾಸದಲ್ಲಿ ರಾಜರನ್ನು ಸಹ ಕಾಣುವರು ಮತ್ತು ಅವರ ಸನ್ನಿಧಿಯಲ್ಲಿ ಧರ್ಮತತ್ವಗಳನ್ನು ಕುರಿತು ಇತರ ಮತೀಯರೊಡನೆ ಚರ್ಚೆ ನಡಿಸುವರು. ಜಗತ್ತಿನಲ್ಲಿ ಎಲ್ಲೆಲ್ಲಿಯೂ ಶಿವನಿದ್ದಾನೆಂದು ಪ್ರಮಾಥರ ತತ್ವವಿದೆ. ಇದನ್ನು ಜೈನರೂ ಬೌದ್ಧರೂ ಅಲ್ಲಗಳೆಯುವವರಾಗಿದ್ದರು. ಆಗ ಜಂಗಮರು ತಮ್ಮ ಸಿದ್ಧಿಯ ಮೂಲಕ ಪರಮಾತ್ಮನನ್ನು ಜಡ ವಸ್ತುಗಳಲ್ಲಿ ಸಹ ಪ್ರಕಟಗೊಳಿಸಿದ್ದಾರೆ. ಹಾಗೆಯೇ ಹರಿಹರರ ವಿಷಯವಾಗಿ ವಾಗ್ವಾದಗಳಾಗುತ್ತಿದ್ದವು. ಆಗ ಜಂಗಮರು ಹರನೇ ಸರ್ವೋತ್ತಮನೆಂದು ಪ್ರತಿಪಾದಿಸುವರು. ಚಾತುರ್ವರ್ಣಗಳ ಸಂಬಂಧವಾಗಿಯೂ ಚರ್ಚೆಗಳೇಳುವವು. ಇವು ಮುಖ್ಯವಾಗಿ ಬ್ರಾಹ್ಮಣರೊಡನೆ. ಆಗ ಜಂಗಮರು ವರ್ಣಗಳೆಂಬುವಿಲ್ಲ, ಶಿವಭಕ್ತರೇ ಶ್ರೇಷ್ಠರೆಂದು ಪ್ರತಿಪಾದಿಸುವರು. ಹೀಗೆ ಜಂಗಮರು ತಾವು ಹೋದಲ್ಲೆಲ್ಲ ವೀರಶೈವ ಮತತತ್ವಗಳ ವಿಷಯವಾಗಿ ವಾದಗಳನ್ನು ಮಾಡುತ್ತ ನಾಡಿನಲ್ಲಿ ಒಂದು ಉಚ್ಚ ಧಾರ್ಮಿಕ ವಾತಾವರಣವನ್ನು ಹುಟ್ಟಿಸುತ್ತಿದ್ದರು.

ಜಂಗಮರು ಅವಶ್ಯ ತೋರಿದಲ್ಲಿ ಸ.ಜ್ಞಾನಿದೇವ, ದೇವರದಾಸಿಮ್ಮಯ್ಯಗಳಂತೆ ಭವಿಗಳಿಗೆ ತತ್ವವನ್ನು ಬೋಧಿಸಿ ಅವರಿಗೆ ದೀಕ್ಷೆಯನ್ನು ಕೊಡುವರು. ಲಿಂಗದ ನೆಲೆಕಲೆಗಳನ್ನು ತಿಳಿಸಿ ಹೇಳುವರು. ಯೋಗ್ಯ ಮಾರ್ಗದಲ್ಲಿ ತಪ್ಪು ದಿಶೆಯಿಂದ ಅನುಸರಿಸುವವರಿಗೆ ಲಿಂಗಾಂಗದ ರೀತಿ ನಡೆಗಳನ್ನು ತಿಳಿಸಿ ಹೇಳುವರು.

ಈ ಪ್ರಕಾರ ಜಂಗಮರು ಬಹು ಪುರಾತನಕಾಲದಿಂದಲೂ ಹಿಂದುಸ್ಥಾನದಲ್ಲಿ ಸಂಚರಿಸುತ್ತ ಬಂದಿದ್ದಾರೆ. ಇದರಿಂದ ಅವರು ಜನರ ಮನ್ನಣೆಗೆ ಪಾತ್ರರಾದರು. ಬಸವೇಶ್ವರನ ವಚನಗಳಲ್ಲಿ ಜಂಗಮರ ವಿಷಯವಾಗಿ ಅಸಂಖ್ಯವಚನಗಳು ಇದ್ದು ಅವುಗಳಮೇಲಿಂದ ಅವನು ಅವರಲ್ಲಿ ಎಷ್ಟು ದೃಢವಾದ ಭಕ್ತಿ ವಿಶ್ವಾಸವುಳ್ಳವನಾಗಿದ್ದನೆಂಬುದು ಒಡೆದು ಕಾಣುತ್ತಿದೆ. ಅದರಂತೆಯೇ ದೇವರ ದಾಸಿಮಯ್ಯ, ಬಹುರೂಪಿ ಚೌಡಯ್ಯ ಮೊದಲಾದ ಅನೇಕ ಶಿವಶರಣರು ಸಹ ಆಚರಿಸಿದ್ದುದು ತಿಳಿದು ಬರುತ್ತದೆ. ಇದಕ್ಕೆ ಜಂಗಮರು ಮಾಡುತ್ತಿದ್ದ ಸಾಮಾಜಿಕ ಕಾರ್ಯಗಳೇ ಕಾರಣವಾಗಿವೆ.

ಜಂಗಮರು ಕೆಲವೊಂದು ವರ್ಗ ಅಥವಾ ಒಂದೇ ಪ್ರಾಂತದವರಿರದೆ ಅವರಲ್ಲಿ ಎಲ್ಲ ವರ್ಗದವರೂ ನಾಡಿನವರೂ ಸಮಾವೇಶವಾಗುತ್ತಿದ್ದರು. ಇದರಿಂದ ಅವರಲ್ಲಿ ಮಾಂಸಾಹಾರಿಗಳೂ ಕೂಡ ಇದ್ದರೆಂಬುದು ಕಂಡುಬರುತ್ತದೆ. ತೆಲುಗು ಜೊಮ್ಮಯ್ಯ, ಗಾಣದ ಕನ್ನಪ್ಪ, ಶ್ವಪಚಯ್ಯ ಬೇಡರ ಕನ್ನಪ್ಪ, ಶಿರಿಯಾಳ-ಚಂಗಳೆ ಇವರಲ್ಲಿ ಯಾರೂ ಶಾಕಾಹಾರಿಗಳಲ್ಲ. ಆದರೂ ಅವರು ಶ್ರೇಷ್ಠತರದ ಶಿವಶರಣರೆಂದು ವೀರಶೈವರಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಾರೆ.

ಜಂಗಮರು ಲಗ್ನವಾಗದವರಾಗಲೇಬೇಕೆಂಬ ನಿಯಮವಿದ್ದ ಹಾಗೆ ತೋರುವದಿಲ್ಲ. ಲಗ್ನವಾಗುವದು ಅಥವಾ ಬಿಡುವದು ಅವರವರ ಇಷ್ಟದ ಮೇಲೆ ಇದ್ದಿತು. ರೇವಣಸಿದ್ಧ, ಪಂಡಿತಾರಾಧ್ಯ ಇವರು ಉಚ್ಚತರಗತಿಯ ಜಂಗಮರೆಂದು ಈಗಲೂ ಭಾವಿಸಲ್ಪಟ್ಟಿರುತ್ತಾರೆ. ಆದರೆ ಇವರೆಲ್ಲರೂ ಲಗ್ನವಾದವರಿದ್ದರು. ಆದರೂ ಅವರು ನಾಡಿನಲ್ಲಿ ಶ್ರೇಷ್ಠ ಶಿವಾನುಭವಿಗಳೆಂದು ಹೆಸರಾದರು. ಹಾಗೆಯೇ ವೇಮನಾರಾಧ್ಯ, ದೇವರ ದಾಸಿಮಯ್ಯ, ವರದಾನಿ ಗುಡ್ಡಮ್ಮ, ಬಸವೇಶ್ವರ, ಉರಿಲಿಂಗಪೆದ್ದಿ, ಇವರೆಲ್ಲರೂ ಲಗ್ನವಾದವರಿದ್ದರು. ಇವರಲ್ಲಿ ಕೆಲವರು ಭಕ್ತ ಸ್ಥಲದವರೂ ಕೆಲವರು ಜಂಗಮಸ್ಥಲದವರೂ ಇದ್ದಾರೆ. ಆದರೆ ಜನತೆಯ ದೃಷ್ಟಿಯಲ್ಲಿ ಅವರೆಲ್ಲರೂ ಉಚ್ಚತರಗತಿಯವರೆಂದು ಭಾವಿಸಲ್ಪಟ್ಟಿರುತ್ತಾರೆ.

ಈ ಜಂಗಮರ ಮೂಲಕವಾಗಿ ಹಿಂದಿನಕಾಲದಲ್ಲಿ ಲಿಂಗಾಂಗಿಗಳಾದ ವೀರಶೈವರಲ್ಲಿ ಒಂದು ಸಂಘಟನೆ ಯುಂಟಾಗಿತ್ತೆಂದು ತೋರುತ್ತದೆ. ಈ ಸಂಘಟನೆಗೋಸ್ಕರ ಕೆಲ ಕೇಂದ್ರಸ್ಥಾನಗಳಾಗಿದ್ದು ಅವು ಕಾಶ್ಮೀರದಲ್ಲಿದ್ದ ಮಾಂಡವ್ಯಪುರ, ಕಾಶೀಪಟ್ಟಣ, ಗುಜರಾಥದಲ್ಲಿ ಸೋಮೇಶ್ವರ, ಕರ್ನಾಟಕದಲ್ಲಿ ಕಲ್ಯಾಣ, ಪಟ್ಟದಕಲ್ಲು, ಪುಲಿಗೆರೆ, ಬನವಾಸಿ, ಮಂಗಳವಾಡ, ಮುದನೂರು, ಸಿದ್ಧಗಂಗಾ, ಆಂಧ್ರದೇಶದಲ್ಲಿ ದ್ರಾಕ್ಷಾರಾಮ, ಶ್ರೀಪರ್ವತ ಮತ್ತು ದ್ರಾವಿಡ ದೇಶದಲ್ಲಿ ಕಂಚಿ ಈ ಸ್ಥಳಗಳು ಇದ್ದಹಾಗೆ ಕಂಡು ಬರುತ್ತದೆ. ಜಂಗಮರ ದೊಡ್ಡ ವಸಾಹತುಗಳು ಈ ಸ್ಥಳಗಳಲ್ಲಿದ್ದು ಅಲ್ಲಿ ಅವರು ಶಿವಧರ್ಮವನ್ನು ಕುರಿತು ಯಾವಾಗಲೂ ಚರ್ಚಿಸುವರು.

ಪುತ್ತ ಆಗಿಂದಾಗ್ಗೆ ದೇಶ ಸಂಚಾರ ಮಾಡುತ್ತ ವೀರಶೈವ ಧರ್ಮವನ್ನು ಎಲ್ಲಕಡೆಗೂ ಪ್ರಸಾರ ಮಾಡುವರು. ಈ ಕಾರ್ಯವು ಬಸವೇಶ್ವರನ ಕಿಂತಲೂ ಕೆಲವು ಶತಮಾನಗಳ ಹಿಂದೆಯೇ ನಡೆದು ಬಂದಿತ್ತು.

ಯಾವ ಸ್ಥಳದಲ್ಲಾದರೂ ವೀರಶೈವರಿಗೆ ಗಂಡಾತರಗಳು ಉಂಟಾಗಿದ್ದುದು ಕಂಡುಬಂದರೆ ಅಲ್ಲಿಯ ಜನರು ತಿಳಿಸಿದಕೂಡಲೇ, ಸುತ್ತಲಿನ ಪ್ರದೇಶಗಳಲ್ಲಿಯ ಜಂಗಮರು ಕೂಡಲೆ ಅಲ್ಲಿ ನೆರೆದು ಸ್ಥಳೀಯ ಜನರ ಸಹಾಯವನ್ನು ಹೊಂದಿ ಎಲ್ಲರೂ ಕೂಡಿ ಒಕ್ಕಟ್ಟಿನಿಂದ ಎದುರಾಳಿಗಳನ್ನು ಇದಿರಿಸುವರು. ಪ್ರಸಂಗಬಂದರೆ ಕಾಳಗಮಾಡುವರು, ಇಲ್ಲವೇ ತಮ್ಮ ಧರ್ಮತತ್ವಗಳನ್ನು ಬಹಿರಂಗವಾಗಿ ಚರ್ಚಿಸಿ ಅವುಗಳನ್ನು ಪ್ರಸ್ಥಾಪಿಸುವರು. ಆಗ ಪೋವಾದಗಳು ಹೇಳಲ್ಪಡುವದುಂಟು. ಇಂಥ ಪ್ರಸಂಗಗಳಲ್ಲಿ ಭಕ್ತಜಂಗಮರು ಶಸ್ತ್ರವನ್ನು ಸಹ ಧರಿಸಿ ವೈರಿಗಳೊಡನೆ ಹೋರಾಡಿದ್ದುಂಟು. ಇಂಥ ಉದಾಹರಣೆಗಳು ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಕೆಳಗೆ ಉದಹರಿಸುತ್ತೇವೆ.

**ಬಾಳೀಹಳ್ಳಿಯ ಕಾಳಗ:—** ಮಲೆನಾಡಿನಲ್ಲಿದ್ದ ಈ ಗ್ರಾಮದಲ್ಲಿ ವೀರೇಶ ದೇವಾಲಯವಿದ್ದು ಅನರಲ್ಲಿಯ ಲಿಂಗವನ್ನು ಪರಧರ್ಮಿಗಳು ಕಿತ್ತು ಹೊಳೆಯಲ್ಲಿ ಬಿಸುಟಬಿಟ್ಟಿದ್ದರು. ಆಗ ರೇವಣ ಸಿದ್ಧೇಶ್ವರನ ಮಗನಾದ ರುದ್ರಮುನಿಯ ಶಿಷ್ಯನಾದ ಮುಕ್ತಿಮುನಿಯು ಶ್ರೀಶೈಲದಲ್ಲಿದ್ದು ಅವನು ಇದನ್ನು ಕೇಳಿ ತನ್ನ ಶಿಷ್ಯನಾದ ದಿಗಂಬರಸು ಮುಕ್ತಿಮುನಿಯನ್ನು ಈ ಮಲೆದೇಶಕ್ಕೆ ಕಳುಹಿಸಲು ಅವನು ಅನೇಕ ಚರಪತಿಗಳನ್ನು ಕೂಡಿಕೊಂಡು ಅಲ್ಲಿಗೆ ಬಂದು ಹೊಳೆಯಲ್ಲಿ ಬಿಸಾಟಿದ ವೀರೇಶನನ್ನು ಹೊನ್ನೂರಿನ ಬಳಿಯಲ್ಲಿ ಎತ್ತಿತಂದು ಅಲ್ಲಿ ಗುಡಿಯಲ್ಲಿ ಪ್ರತಿಷ್ಠಿಸಿದನು. ಆಗ ಅವನು ಕಾಳಗದಲ್ಲಿ ವೈರಿಗಳನ್ನು ಸೋಲಿಸಬೇಕಾಯಿತು. ಆಮೇಲೆ ಅವನು ಬಾಳೆಹಳ್ಳಿ ಎಂಬ ಪುರವನ್ನು ಕಟ್ಟಿಸಿ ಅಲ್ಲಿ ಅವನು ಸಿಂಹಾಸನಾಧೀಶನಾದನು ಈ ದಿಗಂಬರ ಮುಕ್ತಿಮುನಿಯ ತರುವಾಯ ಸುಕುಮಾರ ಚನ್ನಬಸವೇಶ್ವರನು ಸಿಂಹಾಸನಾಧೀಶನಾಗಿ ಶರಣರನ್ನು ಪಾಲಿಸುತ್ತ ಬಂದನು.

**ಮೂರುಡಿಗೆಯ ಕಾಳಗ :—** ವಿಜಾಪೂರ ಜಿಲ್ಲೆಯಲ್ಲಿರುವ ಸಿಂದಿಗಿ ಗ್ರಾಮದ ಪೂರ್ವಕ್ಕೆ ೨೪ ಮೈಲುಗಳ ಮೇಲೆ ಶಿವಪುರವೆಂಬ ಗ್ರಾಮ ಇದೆ. ಅಲ್ಲಿಂದ ಮೂರುಡಿಗೆಯು ೨೦ ಮೈಲುಗಳಿದ್ದು ಅಲ್ಲಿ ಪುರಾತನ ಕಾಲದಲ್ಲಿ ಜೈನರ ದೊಡ್ಡ ವಸಾಹತುವಿತ್ತು. ಅವರು ವೀರಶೈವರನ್ನು ಬಹಳ ಹಿಂಸೆಮಾಡುತ್ತಾ ಇದ್ದರು. ಇದನ್ನು ಶಿವಪುರದಲ್ಲಿದ್ದ ವೀರಶೈವರು ತಿಳಿದು ಜೈನರು ಮೊದಲು ಈ ಗ್ರಾಮದಲ್ಲಿದ್ದ ಶಿವಾಲಯವನ್ನು ತೆಗೆದು ಹಾಕಿದ್ದು ಅದನ್ನು ಪುನಃ ಪ್ರತಿಷ್ಠಿಸಬೇಕೆಂದು ನಿಶ್ಚಯಿಸಿ ಆ ಪುರವನ್ನು ಪ್ರವೇಶಿಸಿದರು. ಆದರೆ ಮೊದಲು ಅಲ್ಲಿಗೆ ಹೋದವರು ಜೈನರಿಂದ ಘಾತಿಸಲ್ಪಟ್ಟರು. ಇದನ್ನು ಸುತ್ತಲಿನ ಪ್ರದೇಶಗಳಲ್ಲಿದ್ದ ಭಕ್ತ ಜಂಗಮರು ತಿಳಿದು ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿ ಮೂರುಡಿಗೆಯ ಗ್ರಾಮವನ್ನು ಪ್ರವೇಶಿಸಲಾಗಿ ಅಲ್ಲಿ ತುಮುಲ ಯುದ್ಧವು ಉಭಯಪಕ್ಷಗಳಲ್ಲಿ ಎಸಗಿತು. ಅದರಲ್ಲಿ ಭಕ್ತರು ಜಯಶೀಲರಾದರು. ಮೂರುಡಿಗೆಯಲ್ಲಿದ್ದ ಮೊದಲಿನ ಶಿವದೇವಾಲಯಗಳನ್ನು ಪುನಃ ಪ್ರತಿಷ್ಠಿಸಿದರು. ಅಲ್ಲದೆ ಈ ಭಾಗದಲ್ಲಿದ್ದ ಅನೇಕ ಬಸದಿಗಳು ಶಿವಾಲಯಗಳಾಗಿ ಮಾಡಲ್ಪಟ್ಟವು. ಹೀಗೆ ಭಕ್ತರಿಗೆ ಮುಂದಾಳುವಾಗಿ ಯುದ್ಧ ಮಾಡಿದವನು ನಾಚಿದೇವನು. ಅವನು ವಚನಕಾರನಿದ್ದಾನೆ ಈ ಪ್ರಕಾರ ಭಕ್ತ ಜಂಗಮರು ಕೂಡಿಕೊಂಡು ಈ ಭಾಗದಲ್ಲಿ ವೀರಶೈವ ಮತವನ್ನು ಪ್ರತಿಷ್ಠಾಪಿಸಿದ್ದಾರೆ.

**ಅಲಂಪುರದ ಕಾಳಗ:–** ಈ ಕಾಳಗದಲ್ಲಿ ಮುಖ್ಯಸ್ಥಳಾಗಿ ತುಮುಲ ಯುದ್ಧವನ್ನೆಸಗಿದವಳು ಒಬ್ಬ ಸ್ತ್ರೀಯಳು. ಅವಳ ಹೆಸರು ವರದಾನಿ ಗುಡ್ಡಮ್ಮೆಯು. ಅವಳ ವಾಸಸ್ಥಳವು ವಿಜಾಪುರ ಪಟ್ಟಣದ ಪಶ್ಚಿಮಕ್ಕೆ ೩೫ ಮೈಲುಗಳಮೇಲೆ ಇರುವ ಗುಡ್ಡಾಪುರವು. ರಾಯಚೂರ ಜಿಲ್ಲೆಯಲ್ಲಿರುವ ಅಲಂಪುರವು ಒಂದು ಪ್ರಸಿದ್ಧ ಕ್ಷೇತ್ರಸ್ಥಳವಾಗಿದೆ. ಅಲ್ಲಿ ಜಾಲ ಬ್ರಹ್ಮೇಶ ಲಿಂಗವು ಬಹು ಪ್ರಸಿದ್ಧವಾದದ್ದು. ಈ ದೇವಸ್ಥಾನವು ಈಗಲೂ ಅಲ್ಲಿ ಇದೆ. ಅದರಲ್ಲಿಯ ಲಿಂಗವನ್ನು ವೈಷ್ಣವರು ಕಿತ್ತುಹಾಕಿ ತುಂಗಭದ್ರಾ ನದಿಯಲ್ಲಿ ಬೀಸಾಟಿದ್ದರು. ಆಗ ಈ ದೇವಾಲಯದ ಪೂಜಾರಿಯಾದ ವೀರ ಮಾಚಯ್ಯನು ವರದಾನಿ ಗುಡ್ಡಮ್ಮೆಯಲ್ಲಿಗೆ ಹೋಗಿ ಅವಳಿಗೆ ಈ ಸಂಗತಿಯನ್ನು ಅರುಹಿದನು. ಅಷ್ಟರಲ್ಲಿ ಈ

ಭಾಗದಲ್ಲಿ ಅವಳಿಗೆ ಬಹುಜನ ಭಕ್ತರಾಗಿದ್ದರು. ಅವಳು ಅವರದೊಂದು ಸೇನೆಯನ್ನು ಅಣಿಮಾಡಿಕೊಂಡು ಅಲಂಪುರ ಗ್ರಾಮದ ಮೇಲೇರಿ ಹೋದಳು. ಆಗ ಅಲ್ಲಿ ಉಭಯ ಪಕ್ಷಗಳಲ್ಲಿ ಕಡುತರವಾದ ಕಾಳಗವೆಸಗಿತು. ಅದರಲ್ಲಿ ಭಕ್ತರು ಜಯಶೀಲರಾದರು. ಆಗ ಅವರು ಬಾಲ ಬ್ರಹ್ಮೇಶ ಲಿಂಗವನ್ನು ಪುನಃ ಸ್ವಸ್ಥಳದಲ್ಲಿ ಪ್ರತಿಷ್ಠಾಪಿಸಿದರು. ಇದರಿಂದ ವರದಾನಿಯಮ್ಮನು ಒಬ್ಬ ಶ್ರೇಷ್ಠ ಶಿವಶರಣೆಯು ಎಂಬ ಕೀರ್ತಿಯು ಸುತ್ತಲೂ ಹಬ್ಬಿತು. ಮತ್ತು ಅವಳಿಂದ ಬಹಳ ಜನರು ಲಿಂಗ ದೀಕ್ಷೆಯನ್ನು ಹೊಂದಿದರು.

ವರದಾನಿಯಮ್ಮನ ಸ್ಮರಣಾರ್ಥವಾಗಿ ದೇವಗಿರಿ ಯಾದವರ ವಂಶದವನಾದ ಮಹಾದೇವ ರಾಜನ ಮಾಂಡಲಿಕನಾದ ಸಾಯಿದೇವನು 'ವಾತಾಪ್ಯಪುರ' ಎಂಬ ಪಟ್ಟಣವನ್ನು ಭೀಮಾನದೀ ತೀರದಲ್ಲಿ ಹೊಸದಾಗಿ ಕಟ್ಟಿಸಿದನು. ಈ ಗ್ರಾಮಕ್ಕೆ ಈಗ 'ವಾಡಪುರ' ಎಂಬ ಹೆಸರು ಇದೆ. ಇದು ವಿಜಾಪುರ ಪಟ್ಟಣದ ಉತ್ತರಕ್ಕೆ ೫೦ ಮೈಲುಗಳ ಮೇಲೆ ಇದೆ. ಹೀಗೆ ಈ ಕಾಲದಲ್ಲಿ ಸ್ತ್ರೀಯರೂ ಭಕ್ತ ಜಂಗಮರೂ ಕೂಡಿಕೊಂಡು ಧರ್ಮಯುದ್ಧದಲ್ಲಿ ಎಸಗಿದ್ದಾರೆ.

**ಸಗರದ ಕಾಳಗಃ**— ಸಗರವೆಂಬ ಗ್ರಾಮವು ಕಲಬುರ್ಗಿ ಜಿಲ್ಲೆಯಲ್ಲಿರುವ ಸುರಪುರ ಗ್ರಾಮಕ್ಕೆ ಸಮೀಪವಿರುತ್ತದೆ. ಇಲ್ಲಿ ಬ್ರಹ್ಮಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು. ಅವನು ಶಿವನೇ ದೈವತವೆಂದು ಭಾವಿಸಿ ಆಚರಿಸುತ್ತಿರಲು ಆ ಗ್ರಾಮದಲ್ಲಿದ್ದ ಜೈನರು ಜಿನನೇ ದೈವವೆಂದು ವಾದಿಸುತ್ತಿದ್ದರು. ಆಗ ಭಕ್ತರಿಗೂ ಜೈನರಿಗೂ ಕಾಳಗವಾಗಲು ಅವುಗಳಲ್ಲಿ ಭಕ್ತರು ಜಯಶೀಲರಾದರು. ಮುಂದೆ ಈ ಪ್ರಾಂತವಲ್ಲೆಲ್ಲ ಬಹುಜನರು ವೀರಶೈವ ಮತವನ್ನು ಸ್ವೀಕರಿಸಿದರು. ಸಗರದ ಬ್ರಹ್ಮಯ್ಯನು ವಚನಕಾರನಿದ್ದಾನೆ.

**ಕೋವೂರಿದ ೧ನೇ ಕಾಳಗಃ**— ಕೋವೂರೆಂಬಲ್ಲಿ ಬ್ರಹ್ಮಯ್ಯನೆಂಬ ರಾಜನು ರಾಜ್ಯವಾಳುತ್ತಿದ್ದ. ಅವನು ಕೇವಲ ಶಿವಭಕ್ತನಾಗಿದ್ದನು. ಅವನ ರಾಜಧಾನಿಯಲ್ಲಿ ಜೈನರು ಬಹು ಪ್ರಬಲರಾಗಿದ್ದು ಅವರು ಅವನನ್ನು ಅತ್ಯಂತವಾಗಿ ವಿರೋಧಿಸುತ್ತಿದ್ದರು. ಅವರ ಸಂಖ್ಯೆಯು ಗ್ರಾಮ

ದಲ್ಲಿ ಬಹು ದೊಡ್ಡದಾಗಿತ್ತು. ಅವರು ರಾಜನು ಶಿವಾನುಭವ ಗೋಷ್ಠಿಯಲ್ಲಿ ಕೆಲವುಕಾಲ ಏಕಾಂತವಾಗಿ ಇರುವ ಸಮಯವನ್ನು ಸಾಧಿಸಿ ಅವನ ಮಗನನ್ನು ಕೊಂದುಹಾಕಿದರು. ಇದಾದ ಮೇಲೆ ಅರಸನು ಗ್ರಾಮದಲ್ಲಿ ಬಹು ವಿಜೃಂಭಣೆಯಿಂದ ಗಣಾರಾಧನೆಯನ್ನು ನಡಿಸುತ್ತಿರುವಾಗ ಅಸಂಖ್ಯ ಜಂಗಮರು ಮತ್ತು ಭಕ್ತರು ಪಟ್ಟಣದಲ್ಲಿ ನೆರೆದರು. ಆ ಸಮಯದಲ್ಲಿ ಅರಸನು ತನ್ನ ಅರಮನೆಯಲ್ಲಿ ಲಿಂಗ ಪ್ರತಿಷ್ಠೆಯನ್ನು ಮಾಡಿದನು. ಜೈನರು ಇದನ್ನು ನೋಡಿ ಸಹಿಸಲಾರದೆ ಅರಸನ ಅರಮನೆಯನ್ನು ಮುತ್ತಿ ಯುದ್ಧವನ್ನು ಪ್ರಾರಂಭಿಸಿದರು. ಆದರೆ ಅರಸನು ಬಹುಜನ ಭಕ್ತರನ್ನು ಆಗ ಬರಮಾಡಿಕೊಂಡಿದ್ದರಿಂದ ಅವನು ಜೈನರನ್ನು ಹಿಮ್ಮೆಟ್ಟಿಸಿ ಅವರ ಬಸದಿಗಳಲ್ಲಿದ್ದ ಜೈನ ಮೂರ್ತಿಗಳನ್ನು ಒಡೆಯಿಸಿದನು. ಆದರೆ ಮುಂದೆ ಕೆಲ ಘಟನೆಗಳಾದಂತೆ ತೋರುತ್ತದೆ. ಅವು ಅವನ ಚರಿತ್ರೆಯಲ್ಲಿ ಹೇಳಲ್ಪಟ್ಟಿಲ್ಲ. ಮುಂದೆ ಬ್ರಹ್ಮಯ್ಯನು ಕೈಲಾಸಕ್ಕೆ ತನ್ನ ಭಕ್ತ ಜನರೊಡನೆ ಬರಬೇಕೆಂದು ಒಂದು ಶಿವಲಿಖಿತವು ಅವನ ಇದಿರಿಗೆ ಬೀಳಲಾಗಿ ಅರಸನು ಭಕ್ತರನ್ನು ಕೂಡಿಕೊಂಡು ತನ್ನ ಕುಲದೈವತವಾದ ರಾಮನಾಥನ ದೇವಾಲಯಕ್ಕೆ ಹೋಗಿ ಅಲ್ಲಿ ದೇವರೆದುರಿಗೆ ಅವರೆಲ್ಲರು ತಮ್ಮನ್ನು ಕಡಿದುಕೊಂಡು ತಮ್ಮ ಪ್ರಾಣವನ್ನು ದೇವರಿಗೆ ಅರ್ಪಿಸಿ ಶಿವಪದವನ್ನು ಹೊಂದಿದರು. ಒಟ್ಟಿಗೆ ಈ ಗ್ರಾಮದಲ್ಲಿ ಘೋರ ಯುದ್ಧಗಳು ನಡೆದು ಅವುಗಳಲ್ಲಿ ಶಿವಶರಣರು ಕಡೆಗೆ ಮೃತಿಯನ್ನು ಹೊಂದಿದಹಾಗೆ ನಮಗೆ ಕಾಣುತ್ತದೆ. ನಾವು ಮೊದಲು ತಿಳಿದಂತೆ ಕೋವೂರು ಜತ್ತಿ ತಾಲೂಕಿನಲ್ಲಿಯ ಕೋಹಳ್ಳಿಯಾಗಿರದೆ, ಅದು ಬೀದರ ಪಟ್ಟಣದ ಸಮೀಪದಲ್ಲಿರುತ್ತದೆಂದು ನಾವು ಕೇಳಿದ್ದೇವೆ.

**ಕೋವೂರಿನ ೨ನೇ ಕಾಳಗ:—** ಈ ಕಾಲದಲ್ಲಿ ಕೋವೂರಲ್ಲಿ ಮಾಧವನೆಂಬ ವಿಷ್ಣುಭಕ್ತನು ರಾಜ್ಯವನ್ನಾಳುತ್ತಿದ್ದನು. ಅವನಿಗೆ ಭಾಸ್ಕರನೆಂಬ ಮಗನಿದ್ದನು. ಈ ಗ್ರಾಮದಲ್ಲಿ ಭೀಮಯ್ಯನೆಂಬ ಶಿವಭಕ್ತನಿದ್ದು ಅವನು ತನ್ನ ಮಗಳು ಚಂದ್ರಾಣಿಯನ್ನು ಬದಿರುಕೋಟೆ (ಬೀದರ) ಯಲ್ಲಿದ್ದ ವೀರ ಸಂಗಯ್ಯನಿಗೆ ಕೊಟ್ಟು ಲಗ್ನಮಾಡಬೇಕೆಂದಿದ್ದನು. ಆದರೆ ಭಾಸ್ಕರನು ಅವಳನ್ನು ತನಗೆ ಕೊಡಬೇಕೆಂದು ಆಗ್ರಹ ಮಾಡಲು ಅದಕ್ಕೆ ಭೀಮಯ್ಯನು ಒಪ್ಪದೆ, ವೀರ ಸಂಗಯ್ಯನನ್ನು ಬರಮಾಡಿಕೊಂಡು ಲಗ್ನ

ಸಮಾರಂಭವನ್ನು ನಡಿಸಿ ಅದನ್ನು ಮುಗಿಸಿದನು. ಆಗ ಭಾಸ್ಕರನು ಮತ್ತಷ್ಟು ಕೆರಳಿದವನಾಗಿ ತನ್ನ ಸೈನ್ಯದೊಂದಿಗೆ ವೀರ ಸಂಗಯ್ಯನು ಹಿಂದಿರುಗಿ ಹೋಗುವ ಕಾಲದಲ್ಲಿ ಅವನ ಜನರ ಮೇಲೆ ಬಿದ್ದು ಕಾಳಗವನ್ನು ಪ್ರಾರಂಭಿಸಿದನು. ಅದರಲ್ಲಿ ಭಾಸ್ಕರನು ಸೋತು ಓಡಿಹೋದನು. ಆದರೆ ತಾನು ಮುಂದೆ ಒಬ್ಬ ಜಂಗಮನ ವೇಷ ಧಾರಣ ಮಾಡಿಕೊಂಡು ವೀರಸಂಗಯ್ಯನನ್ನು ಕಂಡಾಗ್ಗೆ ಅವನನ್ನು ವೀರಸಂಗಯ್ಯನು ನಮಸ್ಕರಿಸುತ್ತಿರಲು ಕಠಾರಿಯಿಂದ ಅವನನ್ನು ತಿವಿದನು. ಆಗ ವೀರಸಂಗಯ್ಯನು ಅವನ ಜಂಗಮ ವೇಷವನ್ನು ನೋಡಿ ಅವನು ಮಾಡಿದ ತಪ್ಪನ್ನು ಕ್ಷಮಿಸಿದನು. ಭಾಸ್ಕರನು ವೀರಸಂಗಯ್ಯನ ಈ ವೃತ್ತಿಗೆ ಪಶ್ಚಾತ್ತಾಪವನ್ನು ಹೊಂದಿ ತಾನೂ ಅವನ ಬಂಧು ಬಳಗದವರೂ ವೀರಶೈವ ದೀಕ್ಷೆಯನ್ನು ಹೊಂದಿದರು.

**ಪುಲಿಗೆರೆಯ ಕಾಳಗ :—** ಗುಜರಾಥ ದೇಶದಲ್ಲಿ ಆದಿಶೆಟ್ಟಿ ಎಂಬ ವ್ಯಾಪಾರಸ್ಥನು ಸೌರಾಷ್ಟ್ರ ಸೋಮೇಶ್ವರನ ಕೇವಲ ಭಕ್ತನಾಗಿದ್ದನು. ಅವನು ವ್ಯಾಪಾರಕ್ಕೋಸ್ಕರ ಧಾರವಾಡ ಜಿಲ್ಲೆಯಲ್ಲಿರುವ ಅಣ್ಣಿಗೇರಿಗೆ ಬಂದು ಅಲ್ಲಿ ಕೆಲವು ದಿವಸವಿದ್ದು ಆ ಮೇಲೆ ಈ ಭಾಗದ ಮುಖ್ಯ ಪಟ್ಟಣವಾದ ಪುಲಿಗೆರೆ ಅಂದರೆ ಲಕ್ಷ್ಮೇಶ್ವರಕ್ಕೆ ಬಂದನು. ಅವನು ಅಲ್ಲಿರುವಾಗ ಪದ್ಮಾವತಿ ಎಂಬ ಜೈನ ಸ್ತ್ರೀಯಳಿಗೆ ಮೋಹಿತನಾಗಿ ಅವಳ ತಾಯಿತಂದೆಗಳ ಒಪ್ಪಿಗೆಯಿಂದ ಆಕೆಯ ಲಗ್ನವಾದನು. ಉಭಯ ದಂಪತಿಗಳು ಶಿವಭಕ್ತರಾಗಿ ಪುಲಿಗೆರಿಯಲ್ಲಿಯೇ ವಾಸಮಾಡುತ್ತಿದ್ದರು. ಹೀಗಿರಲು ಕೆಲವು ಜಂಗಮರು ಪಟ್ಟಣಕ್ಕೆ ಬಂದಿರಲು ಆದಯ್ಯನು ಅವರಿಗೋಸ್ಕರ ಮನೆಯಲ್ಲಿ ಭೋಜನವನ್ನು ಏರ್ಪಡಿಸಿದನು. ಆದರೆ ಅಷ್ಟರಲ್ಲಿ ಕೆಲವು ಜೈನ ಯತಿಗಳು ಪದ್ಮಾವತಿಯ ತಾಯಿಯ ಮನೆಗೆ ಬರಲು ಜಂಗಮರ ಸಲುವಾಗಿ ಪದ್ಮಾವತಿಯು ಸಿದ್ಧಪಡಿಸಿದ ಆಹಾರ ಪದಾರ್ಥಗಳನ್ನು ಅವಳ ತಾಯಿಯು ಕಸಿದುಕೊಂಡು ಹೋಗಿ ಜೈನ ಯತಿಗಳಿಗೆ ನೀಡಿದಳು. ಇದರಿಂದ ಆದಯ್ಯನ ಮನೆಗೆ ಬಂದ ಜಂಗಮರು ಭೋಜನವಿಲ್ಲದೆ ಹಿಂದಿರುಗಬೇಕಾಯಿತು. ಇದರಿಂದ ಆದಯ್ಯನ ಮನಸ್ಸು ನೊಂದವನಾಗಿ ತನ್ನ ಹೆಂಡತಿಯ ತಂದೆಯಾದ ಪಾರಿಸಶೆಟ್ಟಿಯನ್ನು ಕೇಳಲಾಗಿ

ವಾದರೆ ಸಮಾಜದ ಕಟ್ಟು ಉಳಿಯಲಾರದು. ಬಸವೇಶ್ವರನ ಕಾಲದಲ್ಲಿ ಮತ್ತು ಅವನ ತರುವಾಯ ಈ ಐದು ಕಟ್ಟುಗಳು ಪಾಲಿಸಲ್ಪಡುತ್ತ ಬಂದಿದ್ದರಿಂದ ವೀರಶೈವ ಸಮಾಜವು ಅನೇಕ ಬಿಕ್ಕಟ್ಟುಗಳೊಳಗಿಂದ ಪಾರಾಗಿ ಬಂದಿತು. ಈ ಕಟ್ಟುಗಳು ಸಮಾಜಕ್ಕೆ ಯಾವಾಗಲೂ ಅನ್ವಯಿಸುವಂಥವು ಇವೆ. ಅವುಗಳನ್ನು ನಮ್ಮ ಪೂರ್ವಿಕರು ಬಹು ಜಾಣತನದಿಂದ ಕಂಡುಹಿಡಿದಿದ್ದಾರೆ. ಅವು ಯಾವವೆಂದರೆ :—

**ಸದಾಚಾರ :—** ಇದು ಇಲ್ಲದಿದ್ದರೆ ಸಮಾಜದ ಕಟ್ಟು ಉಳಿಯಲಾರದು. ಅದರಿಂದಲೇ ಅದಕ್ಕೆ ಬಲವು ಉತ್ಪನ್ನವಾಗುತ್ತದೆ. ಸದಾಚಾರವು ಸಂಘಟನೆಗೆ ತಳಹದಿಯಾಗಿದೆಂದು ಹೇಳಬಹುದು. **ಭೃತ್ಯಾಚಾರ —** ಪ್ರತಿಯೊಬ್ಬನು ತಾನು ಸೇವಕನೆಂಬ ಭಾವನೆಯಿಂದ ವರ್ತಿಸತಕ್ಕದ್ದು. ಸಮಾಜದಲ್ಲಿ ತಾನು ಒಬ್ಬ ನೇತಾರನೆಂದು ಭಾವಿಸಿದಲ್ಲಿ ಸಮಾಜದ ಕಟ್ಟು ಉಳಿಯಲಾರದು. ಅದು ಕೂಡಲೆ ಕಳಚಿಬೀಳುವದು. **ಶಿವಾಚಾರ —** ಜಾತಿಭೇದವನ್ನು ಎಣಿಸದಿರುವದೇ ಶಿವಾಚಾರವು. ಭಕ್ತರೆಲ್ಲರೂ ಶಿವಸ್ವರೂಪಿಗಳೆಂದು ಭಾವಿಸಿ ಅವರಲ್ಲಿ ಹೆಚ್ಚುಕುಂದುಗಳನ್ನು ಎಣಿಸದೆ ವರ್ತಿಸಬೇಕು. ಈ ಭಾವವು ಇಲ್ಲದ್ದರಿಂದಲೇ ಹಿಂದುಸ್ತಾನವು ದುರ್ಬಲ ರಾಷ್ಟ್ರವಾಗಿದೆ. **ಲಿಂಗಾಚಾರ —** ಶಿವನನ್ನು ಲಿಂಗರೂಪದಲ್ಲಿ ಅರ್ಚಿಸುತ್ತ, ಅವನಲ್ಲಿ ವಿಶ್ವಾಸವನ್ನಿಟ್ಟು ಆಚರಿಸುವದೇ ಲಿಂಗಾಚಾರವು. ಅಂದರೆ ಧರ್ಮದಲ್ಲಿ ವಿಶ್ವಾಸವನ್ನಿಟ್ಟು ವೀರಶೈವನು ವರ್ತಿಸುವದು ಅವನ ಕರ್ತವ್ಯವು. **ಗಣಾಚಾರ —** ತನ್ನನ್ನು ನಿಂದಿಸುವ ಮತ್ತು ಹಿಂಸಿಸುವ ವಿರೋಧಿಗಳನ್ನು ಶಿಕ್ಷಿಸುವದೇ ಗಣಾಚಾರವು ಗಣಾಚಾರವಿರದಿದ್ದರೆ ಸಮಾಜದ ಅಸ್ತಿತ್ವವು ಉಳಿಯಲಾರದು. ಈ ಪ್ರಕಾರ ವೀರಶೈವ ಸಮಾಜಕ್ಕೋಸ್ಕರ ಶಿವಶರಣರು ಕೆಲವು ಕಟ್ಟುಗಳನ್ನು ಮಾಡಿದ್ದಾರೆ. ಇದರಿಂದ ಇದಕ್ಕೆ ಅನೇಕ ಅಘಾತಗಳು ಕಾಲಕಾಲಕ್ಕೆ ಒದಗಿದರೂ ಅವುಗಳೊಳಗಿಂದ ಅದು ಪಾರಾಗಿಬಂದಿರುತ್ತದೆ.

ಈ ಪ್ರಕಾರ ಜಂಗಮರು ವೀರಶೈವ ಸಮಾಜಕ್ಕೋಸ್ಕರ ಮಾಡಿದ ಪ್ರಯತ್ನಗಳನ್ನು ಇಲ್ಲಿ ವಿವರಿಸಿದ್ದೇವೆ. ಈ ವಿವರಣೆಗಳಿಗೆ " ಶಿವಶರಣರ ಚರಿತ್ರೆ " ಗಳು ಭಾಗ ೧, ೨, ೩, ಇವುಗಳಲ್ಲಿ ನಾವು ವಿಶದಪಡಿಸಿದ ಚರಿತ್ರೆಗಳೇ ಆಧಾರಗಳಾಗಿವೆ.